ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೯ ಏಪ್ರಿಲ್–ಮೇ ೨೦೧೩ ಸಂಚಿಕೆ : ೪–೫



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು 106ನೇ ವಸಂತಕ್ಕೆ ಪಾದರ್ಪಣೆ ಮಾಡಿದ ಶುಭಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಹಾಗೂ ಹರಗುರು ಚರಮೂರ್ತಿಗಳು ಶ್ರೀ ಶ್ರೀಗಳವರ ಶಿವ ಪಾದಕ್ಕೆ ಪುಷ್ಪಾರ್ಪಣೆ ಮಾಡಿ ಭಕ್ತಿ ಗೌರವ ಸಲ್ಲಿಸಿದರು.



ಬಸವ ಸಮಿತಿ ಆಯೋಜಿಸಿದ ಶರಣ ಸಂಸ್ಕೃತಿ ಮಹಾಯಾತ್ರೆ ಶ್ರೀಮಠಕ್ಕೆ ಆಗಮಿಸಿದಾಗ ಪೂಜ್ಯ ಶ್ರೀ ಶ್ರೀಗಳವರು ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಬಸವ ಸಮಿತಿ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿ ಹಾಗೂ ಶರಣಾಭಿಮಾನಿಗಳು ಉಪಸ್ಥಿತರಿದ್ದರು.



ಶರಣ ಸಂಸ್ಕೃತಿ ಮಹಾಯಾತ್ರೆಯ ಕೇಂದ್ರ ಬಿಂದು ರಥಾರೂಢ ಬಸವಣ್ಣನವರ ಪುತ್ಥಳಿಯೊಂದಿಗೆ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ಹಾಗೂ ಶ್ರೀ ಅರವಿಂದ ಜತ್ತಿಯವರು.






॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೯ ಏಪ್ರಿಲ್-ಮೇ ೨೦೧೩ ಸಂಚಿಕೆ : ೪-೫

ಸಂಪಾದಕ :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕ :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕ :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**

ವಿತರಣೆ :
**ಆರ್.ಎಸ್. ಮಲ್ಲೇಶಪ್ಪ**

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -೫೭೨ ೧೦೪.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-
ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦

## ಶಾಂತಸೂರ್ಯ

೧೧-೦೪-೨೦೧೩ ರಂದು ಪರಮಪೂಜ್ಯ ಶ್ರೀಗಳವರು ೧೦೬ನ್ನು ತುಂಬಿ ೧೦೭ರತ್ತ ಮುನ್ನಡೆದಿದ್ದಾರೆ. ಬೆನ್ನು ಬಾಗಿದೆ. ಕೈಗೆ ಬೆತ್ತ ಬಂದಿದೆ. ಕಣ್ಣಿಗಿಲ್ಲ ಕನ್ನಡಕ. ಆದರೇನು ಯಾವುದೂ ನಿಂತಿಲ್ಲ. ೧೧-೦೧-೧೯೪೧ರಂದು ಪ್ರಾರಂಭ ವಾದ ಸೇವಾ ಕೈಂಕರ್ಯಕ್ಕೆ ಚ್ಯುತಿ ಬಂದಿಲ್ಲ; ದಿನದಿಂದ ದಿನಕ್ಕೆ ಸೇವೆಯ ಮುಖಗಳು ಹೆಚ್ಚುತ್ತಲೇ ಬಂದಿವೆ. ಹಸಿದು ಬಂದಾಗ ಪ್ರಸಾದ ನೀಡಿ ತೃಪ್ತಿಗೊಳಿಸಿದಂತೆ ನ್ಯಾಯ ನಿರ್ಣಯ ಆಶಿಸಿ ಬಂದ ಗ್ರಾಮೀಣ ಬಂಧುಗಳು ಕೋರ್ಟು ಕಛೇರಿಗಳ ಮೆಟ್ಟಿಲು ಹತ್ತದಂತೆ ನೋಡಿಕೊಂಡಿದ್ದಾರೆ. ಮಂತ್ರ ಮಂಚದ ಮೇಲೆ ತಾಸುಗಟ್ಟಳೆ ಕುಳಿತು ಅಭಯ ದಾಸೋಹಗೈದಿದ್ದಾರೆ. ಆಡುವ ವಯದ ಮಕ್ಕಳ ಭವಿಷ್ಯಕ್ಕಾಗಿ ಅಕ್ಷರಾಲಯಗಳನ್ನು ತೆರೆದು ಕಲಿಯುವಂತೆ ಎಚ್ಚರ ವಹಿಸಿದ್ದಾರೆ. ಮಠದ ಹೊಲಗದ್ದೆಗಳಲ್ಲಿ ರೆಟ್ಟೆ ಮುರಿದು ದುಡಿದಿದ್ದಾರೆ. ಶ್ರೀಮಠದ ಕಟ್ಟಡಗಳಿಗೆ ಕಲ್ಲು ಹೊತ್ತಿದ್ದಾರೆ, ಗಾರೆ ಕಲಿಸಿದ್ದಾರೆ. ಕಾಂಕ್ರೀಟು ತುಂಬಿದ್ದಾರೆ. ಅಡುಗೆ ಮನೆಯಲ್ಲಿ ಒಲೆ ಉರಿಸಿದ್ದುಂಟು, ಮುದ್ದೆ ತಿರುವಿದ್ದುಂಟು, ಸಾರಿಗೆ ಕಾರ ಆಡಿಸಿದ್ದುಂಟು, ಭಕ್ತಾಧಿಗಳಿಗೆ ಪ್ರಸಾದ ನೀಡಿದ್ದುಂಟು, ಜಾತ್ರೆ ಸಂದರ್ಭದಲ್ಲಿ ಬೆಟ್ಟಗುಡ್ಡಗಳಿಗೆ ಹೋಗಿ ಸೌದೆ ಕಡಿದು ತಂದಿದ್ದಾರೆ. ದನಕರುಗಳ ಆರೈಕೆಯಲ್ಲಿ ಹಿಂದೆ ಬೀಳಲಿಲ್ಲ. ಸಭೆ ಸಮಾರಂಭಗಳನ್ನು ಆಯೋಜಿಸಿ ವಿದ್ವಾಂಸರಿಂದ ಉಪನ್ಯಾಸ ಮಾಡಿಸುತ್ತ ನಡೆದಿದ್ದಾರೆ. ಜಾತ್ರೆಗೆ ಹೊಸ ಹೊಸ ರೂಪ ಕೊಡುತ್ತ ಬಂದಿದ್ದಾರೆ. ವಸ್ತು ಪ್ರದರ್ಶನ, ಧರ್ಮದೀಪಕರ ಉಪನ್ಯಾಸಮಾಲೆ, ರಾಸುಗಳಿಗೆ ಬಹುಮಾನ ವಿತರಣೆ, ಬೆಳ್ಳಿಯ ಶೂನ್ಯಸಿಂಹಾಸನ ರಥ ನಿರ್ಮಾಣ, ಹಿರಿಯ ಗುರುಗಳ ಸ್ಮರಣೋತ್ಸವ, ರಾಷ್ಟ್ರೀಯ ಹಬ್ಬಗಳ ಆಚರಣೆ, ಅನಾಥರಿಗೆ ಆಶ್ರಯ ಕಲ್ಪಿಸಿಕೊಟ್ಟಿದ್ದಾರೆ, ವಿದ್ವಾಂಸರನ್ನು ಗೌರವಿಸಿದ್ದಾರೆ. ಕ್ರೀಡಾಕಲಿಗಳನ್ನು ಪ್ರೋತ್ಸಾಹಿಸಿದ್ದಾರೆ. ಗ್ರಾಮಾಂತರ ಬಸವ ಜಯಂತಿ ಯೋಜನೆಯ ಮೂಲಕ ನಾಟಕ ಪ್ರದರ್ಶನ ಮಾಡಿಸುತ್ತ ಬಸವತತ್ವ ಪ್ರಚಾರದಲ್ಲಿ ಹೊಸ ಆಯಾಮವನ್ನೇ ಸೃಷ್ಟಿಸಿದ್ದಾರೆ. ಪುಸ್ತಕ ಪ್ರಕಟಣೆ ಯೋಜನೆಯ ಮೂಲಕ ಹಳೆಯ ಹಾಗೂ ಹಿತೈಷಿಗಳ ಸಂಘದ ವತಿಯಿಂದ ಅಮೂಲ್ಯವೆಂಬಂತಹ ನೂರಿಪ್ಪತ್ತಕ್ಕೂ ಹೆಚ್ಚು ಗ್ರಂಥಗಳ ಪ್ರಕಟಣೆ ಮಾಡಿಸಿದ್ದಾರೆ. 'ಸಿದ್ಧಗಂಗಾಶ್ರೀ ಪ್ರಶಸ್ತಿ', 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ, 'ಸಂಘಸಿರಿ' ಪ್ರಶಸ್ತಿ, 'ಅಟವೀಶ್ರೀ' ಪ್ರಶಸ್ತಿ, 'ಉದ್ಧಾನಶ್ರೀ' ಪ್ರಶಸ್ತಿ, 'ಗೋಸಲಶ್ರೀ' ಪ್ರಶಸ್ತಿಗಳನ್ನು ಪ್ರದಾನಿಸುತ್ತ ಮುನ್ನಡೆದಿದ್ದಾರೆ. ಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರಿಗೆ ಅಧ್ಯಕ್ಷ ಸ್ಥಾನವನ್ನು ಆಶೀರ್ವದಿಸಿ -ಶ್ರೀಮಠದ ವಿದ್ಯಾಸಂಸ್ಥೆಯಡಿಯಲ್ಲಿ ಸೇವಾಮುಖಿಗಳಾಗಿರುವ ಶಾಲಾಕಾಲೇಜುಗಳ ಆಡಳಿತ ವ್ಯವಹಾರವನ್ನು ಒಪ್ಪಿಸಿದ್ದಾರೆ. ಇಂದೂ ಕೂಡ ನೂರಾರು ಕಿ.ಮೀ. ಸಂಚರಿಸುತ್ತ ಭಕ್ತಾದಿಗಳ ಇಷ್ಟಾರ್ಥಗಳನ್ನು ಪೂರೈಸಿಕೊಡುತ್ತಿರುವ ಅದಮ್ಯ ಉತ್ಸಾಹಿಗಳಾಗಿರುವುದು ನಾಡಿನ ಪುಣ್ಯ. ಗ್ರಂಥಾವಲೋಕನ ಮಾಡದ ದಿನಗಳಿಲ್ಲ. ಲಿಂಗಪೂಜಾಯೋಗ ಜಗತ್ತಿನ ಪರಮತಪಸ್ವಿಗಳಾಗಿ ಅಲ್ಲಮಪ್ರಭುದೇವರು ಹೇಳುವಂತೆ 'ಯಾವಾಗಲೂ ಜಾಗರವಿದ್ದು ಸಸಿಯ ಸಲಹುವ' ಎಚ್ಚರದಲ್ಲಿ ಕೋಟಿ ಕೋಟಿ ಮನಸ್ಸುಗಳ ಶಾಂತಸೂರ್ಯರಾಗಿ ಬೆಳಗುತ್ತಿದ್ದಾರೆ. ಈ ಪುಣ್ಯ ನಮ್ಮದು.

– ಸಂಪಾದಕ





## ದಿವ್ಯಸಂದೇಶ



ಚುನಾವಣೆಗಳು ಭ್ರಷ್ಟಾಚಾರದ ಪಾಪಕೂಪಗಳಾಗುತ್ತಿರುವುದು ದುರ್ದೈವದ ಸಂಗತಿ. ಊಹಿಸಲಸಾಧ್ಯವಾದ ರೀತಿಯಲ್ಲಿ ಭ್ರಷ್ಟಾಚಾರದ ಕರ್ರಾಳ ಬಾಹುಗಳು ಅಮಾಯಕ ಪ್ರಜೆಗಳನ್ನು ದಾರಿ ತಪ್ಪಿಸುತ್ತಿವೆ. ಮಾತುಕೃತಿಗಳಲ್ಲಿ ಸಾಮರಸ್ಯವಿಲ್ಲ. ಆಡುವುದೇ ಒಂದು ಮಾಡುವುದು ಮತ್ತೊಂದು. ಆಸೆ ಆಮಿಷಗಳ ರಹಸ್ಯ ವ್ಯವಹಾರಕ್ಕೆ ಹೇಳಿಸಿಮಾಡಿಸಿದಂತೆ ಚುನಾವಣೆಯ ದಂಧೆ ನಡೆದಿದೆ. ಅಧಿಕಾರದಾಹ ಅನ್ಯಾಯ, ಅನಾಚಾರಗಳಿಗೆ ದಾರಿ ಮಾಡಿ ಕೊಡುತ್ತಿದೆ. ಪ್ರಜಾಪ್ರಭುತ್ವ ಎತ್ತ ಸಾಗುತ್ತಿದೆ ಎಂಬ ಪ್ರಶ್ನೆ ಎದುರಾಗುತ್ತದೆ. ಚುನಾವಣೆಗೆ ನಿಲ್ಲುವವರು ಅರಿಯದವರೇನೂ ಅಲ್ಲ, ಎಲ್ಲ ತಿಳಿದವರೇ, ತಪ್ಪು-ಒಪ್ಪುಗಳ ವ್ಯತ್ಯಾಸವನ್ನರಿತವರೇ, ತಾವು ಮಾಡುತ್ತಿರುವುದು ಅಪಚಾರ, ಅನೀತಿ, ಮೋಸ, ದ್ರೋಹ, ಎಂಬುದನ್ನರಿತವರೇ, ಆದರೆ 'ಅಧಿಕಾರ' ದಾಹ ಬಲವತ್ತರವಾದುದು. ಜಾತಿಯಿಲ್ಲದ ಕಡೆ ಜಾತಿ ಬರುತ್ತದೆ, ಪ್ರದೇಶವಿಲ್ಲದ ಕಡೆ ಪ್ರದೇಶ ಬರುತ್ತದೆ, ಅಧಿಕಾರದಲ್ಲಿದ್ದು ನಿವೃತ್ತರಾದರೂ ಸೇವೆಯ ಸೋಗಿನಲ್ಲಿ ಅಧಿಕಾರ ಕೈಚಾಚಿ ಕರೆಯುತ್ತದೆ. ಗಂಡು, ಹೆಣ್ಣು ಎಂಬುದಕ್ಕೆ ಮಾನ್ಯತೇ ಬೇಡುತ್ತದೆ. ಪ್ರಜಾಪ್ರಭುವಿನ ಕಾಲಿಗೆ ಬೀಳುವಂತೆ, ಕೈಮುಗಿಯುವಂತೆ, ಅಮ್ಮ, ಅಕ್ಕ, ದೊಡ್ಡವ್ವ, ಯಜಮಾನ ಎಂಬೆಲ್ಲ ಬಂಧು ವಾಚಕಗಳ ಸೋಗಿನ ಸೊಲ್ಲುಗಳು ಗೆಲ್ಲಲಾಳಿಸುತ್ತವೆ. ಕೊಡುಗೆಗಳು ವಿವಿಧ ರೂಪಗಳಲ್ಲಿ ಕೊಡಲಾಗುತ್ತವೆ. ಕುರ್ಚಿಗಾಗಿ ಖರ್ಚು ಮಾಡಲು ಸ್ಪರ್ಧೆ ನಡೆಯುತ್ತದೆ. ನೀತಿ ಸಂಹಿತೆಗಳು ಇವೆ. ಆದರೂ ಅವುಗಳ ಸಂದಿನಲ್ಲಿ 'ಆಶೆ ನರ್ತಿಸುತ್ತದೆ. ಹಗಲು ಹನ್ನೆರಡು ಘಂಟೆಯಲ್ಲಿ ದೀಪ ಹಿಡಿದು ಹುಡುಕುವಂತಾಗಿದೆ. ಪ್ರಾಮಾಣಿಕ, ಸಭ್ಯ, ಸೇವಾನಿಷ್ಠ ಚುನಾವಣಾಕಾಂಕ್ಷಿ ಅಭ್ಯರ್ಥಿ ಕಾಣುವಂತಾಗಿರುವುದು. 'ಸುಳ್ಳು ನಮ್ಮಲ್ಲಿಲ್ಲ; ಸುಳ್ಳೇ ನಮ್ಮ ಮನೆ ದೇವರು' ಎಂಬಂತಾಗಿದೆ.

❖

## ಶ್ರೀ ಸಿದ್ಧಲಿಂಗೇಶ್ವರ ವಚನ



*ಅಂಡಜ ಪಿಂಡಜ ಬಿಂದುಜ ಸ್ವೇದಜ ಉದಯವಾಗದಂದು ಆತ್ಮತತ್ವ ವಿದ್ಯಾತತ್ವ ಶಿವತತ್ವವೆಂಬ ತತ್ವತ್ರಯಂಗಳ ನಾಮ ಸೀಮೆಗಳೇನೂ ಇಲ್ಲದಂದು, ಆಚಾರವನಾಚಾರ ವಿಲ್ಲದಂದು, ಸೀಮೆ ನಿಸ್ಸೀಮೆ ಇಲ್ಲಂದಂದು, ಗಮನ ನಿರ್ಗಮನ ಇಲ್ಲದಂದು ಪುಣ್ಯಪಾಪ ಧರ್ಮಕರ್ಮ ಸ್ವರ್ಗ ನರಕ ಇಹಪರ ಇಲ್ಲದಂದು ಪರಾತ್ಪರ ವಸ್ತು ನೀನೊಬ್ಬನೆ ಇರ್ದೆಯಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ತತ್ತಿ ಒಡೆದು ಹುಟ್ಟುವಂಥ ಸರ್ಪ ಮೊದಲಾದ ಪ್ರಾಣಿಗಳು ಇಪ್ಪತ್ತೊಂದು ಲಕ್ಷ, ಆತ್ಮರ ಮಾಸ ಬಿಂದು ಪ್ರತಿಷ್ಠಿತವಾಗಿ ಹುಟ್ಟಲ್ಪಟ್ಟ ನರಪಶು ಮೊದಲಾದ ಪ್ರಾಣಿಗಳು ಇಪ್ಪತ್ತೊಂದು ಲಕ್ಷ, ಬೆವರು ಬಿಂದುವಿನಿಂದ ಹುಟ್ಟಲ್ಪಟ್ಟಂಥ ಹೇನು ಕೂರೆ ತಗುಣಿ ಮೊದಲಾದ ಪ್ರಾಣಿಗಳು ಇಪ್ಪತ್ತೊಂದು ಲಕ್ಷ, ನೀರಿನಲ್ಲಿ ಹುಟ್ಟಲ್ಪಟ್ಟಂಥ ಮೀನು ಮೊಸಳೆ ಏಡಿ ಕಪ್ಪೆ ಪ್ರಾಣಿಗಳು ಇಪ್ಪತ್ತೊಂದು ಲಕ್ಷ, ಈ ಚೌಳೀತಿಪ್ರಾಣಿಗಳು ಉತ್ಪತ್ಯವಾಗದಕ್ಕಿಂತ ಮೊದಲೆ, ಆತ್ಮತತ್ವ ಇಪ್ಪತ್ತೈದು, ವಿದ್ಯಾತತ್ವ ಹತ್ತು, ಶಿವತತ್ತ್ವ ಒಂದು, ಹೀಗೆಂಬ ತತ್ವ ಮೂರರ, ನಾಮಸೀಮೆಗಳೇನೂ ಇಲ್ಲಂದು, ಪಂಚಾಚಾರವಿಡಿದಾಚರಿಸುವಂಥದೆ ಆಚಾರ, ಪಂಚಾಚಾರಕ್ಕೆ ತಪ್ಪಿ, ಪಂಚಮಹಾಪಾತಕಗಳೊಡದನೆ ಕೂಡಿ ಆಚರಿಸುವಂಥದೆ ಅನಾಚಾರ, ಉಂಟಾಗುವ ಮೊದಲೆ, ಸೀಮೆ ನಿಸ್ಸೀಮೆಗಳು ಜ್ಞಾನಕ್ರಿಯೆಗಳು, ಉಂಟಾಗುವ ಮೊದಲೆ, ಗಮನ ನಿರ್ಗಮನ ಶರಣಲಿಂಗವು ಉಂಟಾಗುವ ಮೊದಲು, ಪುಣ್ಯ ಪಾಪ ಕರ್ಮಗಳು ಇಲ್ಲದಂದು, ಧರ್ಮಕರ್ಮಗಳಿಲ್ಲ ದಂದು, ಸ್ವರ್ಗನರಕ ಇಹಪರಗಳಿಲ್ಲದಂದು ನೀನೊಬ್ಬನೆ ಏಕ ದೇಶ ಮಾತ್ರವಾಗಿ ಬಯಲಿಗನಾಗಿ ಒಪ್ಪುತ್ತಿದ್ದಿಯ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು – ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ತನುಶುದ್ಧ ಮನಶುದ್ಧ ಭಾವಶುದ್ಧನಾಗಿ
ಸೇವಾದೀಕ್ಷಿತನಾಗಿ ಬಾಳೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನಿಜಾಚರಣೆ ಅರಿತವರೆಷ್ಟೆಂಬೆ
ನಿಮ್ಮ ಸೇವಾಪಥವ ಕಂಡವರು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರಸದಾಳೆಕಟ್ಟೆನಲೆ ರಸಬಾಳೆ ಹಣ್ಣೆನಲೆ
ಹಸುಮಕ್ಕಳ ಕಣ್ಣೊಳಗಿನ ನಿನ್ನ ಬಿಂಬ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಯೋಗದ ಶಿವರಾಜ ಶಿವಸುಖದ ಸುಮ್ಮಾನಿ
ಶಿವಲೋಕವನೆಳೆತರುವ ಶಿವಧೀರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತೆಲ್ಲ ಶಿವಮಂತ್ರ ನಡೆಯೆಲ್ಲ ಶಿವಬಟ್ಟೆ
ಕಥನ ಕಾಯಕವೆಲ್ಲ ಶಿವಚರಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆದಾಡುವ ಶ್ರೀಮಠವೆ ನುಡಿಮಂತ್ರ ಶ್ರೀವೇದ
ಪ್ರಣವ ಪ್ರತಿರೂಪಾದ ಶ್ರೀಚೆಲುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಜ್ಜನ ಸದ್ಭಾವಿಗಳ ಸಂಗವನೆ ಕರುಣಿಸು
ಬೇಡುವೆನು ನಾ ನಿಮ್ಮನವರತ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರು ರೂಪದಿ ಅವತರಿಸಿ ಭವಿಭಕ್ತರೆನ್ನದೆ
ದಯೆಯ ಪ್ರಸಾದವನುಣಿಸುತಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕದೊಳಗೆ ಇದ್ದು ಲೋಕವಿರಹಿತನಾಗಿ
ಶರಣತತ್ವದ ಬೆಳಕಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರವೆಂಬುದು ಅರಿವಿನ ಸಿರಿಗಿರಿಯೆಂಬೆ
ಆಚಾರ ಸುವಿಚಾರದ ಸೋಪಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– **ಹೆಚ್.ವಿ. ವೀರಭದ್ರಯ್ಯ**





## ಆವರ್ತನಶೀಲ ಜಗತ್ತು

– **ಶ್ರೀ ಸಿದ್ಧೇಶ್ವರ ಸ್ವಾಮಿಗಳು** *

**ಜ**ಗತ್ತಿನ ಎಲ್ಲೆಡೆ ಎದ್ದು ಕಾಣುವ ಒಂದು ಮಹತ್ವದ ಸಂಗತಿ ಎಂದರೆ 'ಆವರ್ತನಶೀಲತೆ'. ಪ್ರತಿ ವಸ್ತು ಆವರ್ತನೆ ಗೊಳ್ಳುತ್ತಿದೆ. ಜಗತ್ತಿಗೆ ಜಗತ್ತೇ ಆವರ್ತನಗೊಳ್ಳುತ್ತಿದೆ. ಸಾಗರ ದಿಂದ ಆಗಸಕ್ಕೇರಿದ ಹನಿ ಮತ್ತೆ ಸಾಗರ ಕೂಡಿಕೊಳ್ಳುತ್ತದೆ. ಅತ್ಯಂತ ಸೂಕ್ಷ್ಮ ಅಣುವಿನಿಂದ ಪ್ರಾರಂಭವಾದ ದೇಹ ಬೆಳೆದು ಕೊನೆಗೊಮ್ಮೆ ಮತ್ತೆ ಅಣುರೂಪ ತಾಳುತ್ತದೆ. ಮಧ್ಯದಲ್ಲಿ ಬಹಳಷ್ಟು ದೂರ ಸಾಗಿದಂತೆ ನಮಗೆ ಭಾಸ ವಾಗುತ್ತದೆ. ಆದರೆ ಕೊನೆಗೆ ಪ್ರಾರಂಭವಾದಲ್ಲಿಗೇ ಹೋಗುತ್ತದೆ. ಮಣ್ಣಿನಿಂದ ಮಣ್ಣಿಗೆ! ಇದು ಒಂದು ಆವರ್ತನ!

ಒಂದು ಬೀಜ. ಇಲ್ಲಿಂದ ವೃಕ್ಷದ ಆವರ್ತನ ಆರಂಭ ವಾಗುತ್ತದೆ. ದೊಡ್ಡ ವೃಕ್ಷವಾಗಿ ಬೆಳೆಯುತ್ತದೆ. ವೃಕ್ಷ ಮತ್ತೆ ಒಂದು ಬೀಜದಲ್ಲಿ ಪರ್ಯವಸಾನಗೊಳ್ಳುತ್ತದೆ. ಇದು ಜೀವನ ಚಕ್ರ, ಪರಿಭ್ರಮಣದ ಚಕ್ರ, ಇದು ನಿಂತುಹೋಗುವ ಚಕ್ರವಲ್ಲ. ಎಂದು ವಿಶ್ವ ಪ್ರಾರಂಭ ಆಗಿದೆ; ಅಂದೇ ಆವರ್ತನ ಆರಂಭ. ಈ ಆವರ್ತನೆಯನ್ನು ಬದಲು ಮಾಡಲು ಆಗದು.

ದೇಹ ತನ್ನ ಗತಿಯಲ್ಲಿ ಆವರ್ತನೆಗೊಳ್ಳಲು ಆರಂಭಿಸಿತೋ ಯಾವ ಹಂತದಲ್ಲೂ ಆ ಆವರ್ತನೆಯ ಕ್ರಮ ನಿಲ್ಲದು. ಬಾಲ್ಯ, ಅದರ ನಂತರ ಯೌವನ, ಬಳಿಕ ಮುಪ್ಪು; ಅದರ ಹಿಂದೆ ಸಾವಿದೆ; ಭೂತಗಳಿಂದ ವಿಕಸಿಸಿದ ದೇಹ ಭೂತಗಳಿಗೆ. ಬಾಲ್ಯ, ಯೌವನ, ಮುಪ್ಪು, ಸಾವು ಯಾವುದನ್ನೂ ತಡೆಯಲಾಗದು! ಸಾವು ಮತ್ತೊಂದು ಆವರ್ತನೆಗೆ ಕಾರಣವಾಗುವುದು. ಇದು ಕ್ರಮ. ಇದನ್ನು ಯಾವ ಶಕ್ತಿಯೂ ನಿಲ್ಲಿಸದು. ತೆರೆ ಏಳುತ್ತದೆ. ಮೇಲೇರುತ್ತದೆ. ಕೊನೆಗೆ ಇಳಿಯುತ್ತದೆ ಎಲ್ಲ ವಸ್ತುಗಳೂ ಹೀಗೆಯೇ. ಮನುಷ್ಯ ಈ ಆವರ್ತನೆ ಯನ್ನು ನಿಲ್ಲಿಸುವ ಅಥವಾ ಬದಲಿಸುವ ಕನಸು ಕಾಣುತ್ತಾನೆ. ಶಕ್ಯವಾಗದಾಗ ದುಃಖಿಯಾಗುತ್ತಾನೆ. ವಿಶ್ವವೇ ಆವರ್ತನ ಗೊಳ್ಳುತ್ತಿರುವಾಗ, ಆವರ್ತನೆಯನ್ನು ತಡೆಯುವುದು ಹೇಗೆ? ಸೂರ್ಯ ನೂರಾರು ಕೋಟಿ ವರ್ಷಗಳ ಹಿಂದೆ ತನ್ನ ಮೊದಲನೇ ಕಿರಣಗಳನ್ನು ಸುತ್ತಲೂ ಹರಹಿದ. ಅವನ ಬದುಕಿನ ಪ್ರವಾಹ ಸಾಗಿ ಈಗ ಮಧ್ಯಮ ಸ್ಥಿತಿಗೆ ತಲುಪಿದೆ. ಇನ್ನು ಮೇಲೆ ಆತ ಇಳಿಯಬೇಕು; ಮರೆಯಾಗ ಬೇಕು. ಆಗುತ್ತಾನೆ. ಯಾರೂ ಅದನ್ನು ತಡೆಯರು. ಎಲ್ಲಾ ರೋಗಗಳ ಮೇಲೆ ಔಷಧಿ ಇರಬಹುದು. ಆದರೆ ಮುಪ್ಪಿನ ಮೇಲೆ, ಮರಣದ ಮೇಲೆ ಔಷಧಿ ಎಲ್ಲಿ?

ಬರಿ ಏರಿಕೆಯ ಅವಸ್ಥೆಯೊಳಗೆ ಇರಲು ಸಾಧ್ಯವಿಲ್ಲ. ಬರೀ ಇಳಿಕೆಯ ಅವಸ್ಥೆಯೊಳಗೆ ಇರಲೂ ಸಾಧ್ಯವಿಲ್ಲ. ಏರಿಕೆ, ಇಳಿಕೆ, ಇದು ಸತತವಾಗಿ ಸಾಗುತ್ತಿರುವ ಪ್ರವಾಹ. ವಿಶ್ವದ ಎಲ್ಲ ಕ್ಷೇತ್ರಗಳಲ್ಲಿ ಹಂತಹಂತಗಳಲ್ಲಿ ಈ ಆವರ್ತನಾ ಚಕ್ರವನ್ನು ನಾವು ಗುರುತಿಸಬೇಕು. ಇದು ತತ್ತ್ವ ತಿಳಿವು.

ವಿಜಯನಗರ ಸಾಮ್ರಾಜ್ಯ ತಲೆದೋರಿತು. ನೂರು ವರ್ಷಗಳ ಕಾಲ ಅಪ್ರತಿಮವಾಗಿ ಅರಳಿತು. ಸುವರ್ಣ ಮುತ್ತು ರತ್ನ ರಸ್ತೆಯಲ್ಲಿಟ್ಟು ಮಾರಿದರು. ಕಸ ಗುಡಿಸಿದವರೂ ಧನಿಕರಾದರು. ಏರಿಕೆ ನಿಂತಿತು, ಇಳಿಕೆ ಆರಂಭವಾಯ್ತು. ಇಂದು ಹಂಪೆ ಹಾಳೂರು! ಯಾವಾಗಲೂ ಒಂದೇ ಸ್ಥಿತಿ ಯೊಳಗೆ ಈ ಜಗತ್ತಿನ ವಸ್ತುವನ್ನು ಹಿಡಿದಿಡಲು ಆಗುವುದಿಲ್ಲ. ಎಷ್ಟು ನಾವು ಪ್ರಯತ್ನಪಟ್ಟರೂ ಸಹಿತ ಗಾಳಿಯ ಪಟವನ್ನು ಒಂದು ಮಟ್ಟದಲ್ಲಿ ಶಾಶ್ವತವಾಗಿ ಹಿಡಿದಿಡಲು ಹೇಗೆ ಸಾಧ್ಯ? ಗಾಳಿ ಬೀಸುತ್ತಲೇ ಇರುವುದು; ಆ ಪಟ ಹೊಯ್ದಾಡುತ್ತಲೇ ಇರುವುದು. ಗಾಳಿ ತಡೆದು ನಿಲ್ಲಿಸಿದರೆ ಪಟ ಮೇಲೇರದು. ಗಾಳಿ ಬೀಸುತ್ತಿದ್ದರೆ ಒಂದೇ ಹಂತದಲ್ಲಿ ನಿಲ್ಲದು. ಆಕಾಶದಲ್ಲಿ ಪಟ ತೇಲಲೇಬೇಕಾದರೆ ಗಾಳಿ ಬೀಸಲೇ ಬೇಕು. ಗಾಳಿ ಬೀಸುತ್ತ ಇರುವವರೆಗೆ ಸ್ಥಿರವಾಗಿ ನಿಲ್ಲಿಸಲಾಗದು. ಅದು ಹೊಯ್ದಾಡುತ್ತಲೇ ಇರಬೇಕು. ಅದರಲ್ಲಿಯೇ ಆನಂದ ಮನರಂಜನೆ.

ಕಾಲದ ಗಾಳಿ ಬೀಸುತ್ತದೆ. ಜೀವನದ ಪಟ ಹಾರುತ್ತದೆ. ಪ್ರತಿ ಕ್ಷಣ ಹೊಯ್ದಾಡುತ್ತಲೇ ಇರುತ್ತದೆ. ನಾವು ಕನಸು ಕಾಣುತ್ತೇವೆ. ಎಲ್ಲ ಸ್ಥಿರವಾಗಿರಬೇಕೆಂದು. ಕುಳಿತ ಈ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅಧಿಕಾರದ ಕುರ್ಚಿ ಅಲುಗಾಡಬಾರದು, ನಮ್ಮನ್ನು ಬಿಟ್ಟು ಸರಿಯಬಾರದು ಎಂದು ಬೇಕಾದಷ್ಟು ಪ್ರಯತ್ನ ಪಡುತ್ತಿರುತ್ತೇವೆ. ಈ ಕುರ್ಚಿಯನ್ನು ಉಳಿಸಿಕೊಳ್ಳಲಿಕ್ಕೆ ಯಾರಿಗೂ ಆಗುವುದಿಲ್ಲ. ಏಕೆಂದರೆ ಅದು ಆವರ್ತನ ದೊಳಗೆ ಸಿಕ್ಕಿದೆ. ಕುರ್ಚಿ ಹೇಳುತ್ತದೆ, 'ಮನುಷ್ಯನೇ, ನಾನು ಆವರ್ತನಕ್ಕೆ ಒಳಗಾಗಿದ್ದೇನೆ. ಪ್ರವಾಹಕ್ಕೆ ಒಳಗಾಗಿದ್ದೇನೆ. ಇದರ ಮೇಲೆ ಎಷ್ಟು ಜನ ಬಂದು ಕೂಡುತ್ತಾರೆ ಅವರೆಲ್ಲ ಇಳಿಯಬೇಕಾಗುತ್ತದೆ. ಏಕೆಂದರೆ ಅದು ಆವರ್ತನದ ನಿಯಮ. ಒಬ್ಬನೇ ಕೂಡಲಿಕ್ಕೆ ಅವಕಾಶವಿಲ್ಲ. ನೀನು ಕೂತವನೋ? ಹಾಗಾದರೆ ಇಳಿಯುವ ಸಿದ್ಧತೆಯಲ್ಲಿರು'.

ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ –ಹೀಗೆ ಯುಗ ಸುತ್ತುತ್ತವೆ. ಶುದ್ಧ ಸತ್ವದ ಕಾಲಖಂಡವು ಕೃತಯುಗ. ಸ್ವಲ್ಪ ಅಸತ್ಯ ಬೆರಸಿದರೆ ತ್ರೇತಾಯುಗ. ಇನ್ನೂ ಸ್ವಲ್ಪ ಹೆಚ್ಚು ಬೆರೆತುಬಿಟ್ಟರೆ ದ್ವಾಪರಯುಗ. ಸತ್ಯ ಇಲ್ಲ ಅನ್ನುವಷ್ಟು ಅಸತ್ಯ ಬೆರೆಸಿಬಿಟ್ಟರೆ ಕಲಿಯುಗ. ಈ ಮಟ್ಟಕ್ಕೆ ಬಂದ ನಂತರ ಮತ್ತೆ ಸತ್ಯವಂತರ ಯುಗ. ಇದು ವಿಶ್ವ ನಿಯಮ ಇರುವಾಗ ಯಾರು ಏನು ಮಾಡಿಯಾರು?

**'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ'** ಭಗವಂತ ಶ್ರೀಕೃಷ್ಣ ಹುಟ್ಟಿಬಂದ. ಏನು ಮಾಡಲಿಕ್ಕೆ ಹುಟ್ಟಿ ಬಂದ? ಧರ್ಮವನ್ನು ಸ್ಥಾಪನೆ ಮಾಡಬೇಕೆಂದು ಹುಟ್ಟಿ ಬಂದ. ಧರ್ಮವನ್ನೂ ಪ್ರತಿಷ್ಠಾಪಿಸಿದ. ಸ್ಥಾಪಿಸಿ ಹೋಗುವಾಗ ಹೇಳಿದ, 'ಇನ್ನು ಮೇಲೆ ಕಲಿಯುಗ ಬರುತ್ತದೆ ಜಾಗ್ರತೆಯಾಗಿ ಇರಿ' ಅಂತ. ಅಂದರೆ ಅವತಾರಿ ದೇವನೇ ಪ್ರಯತ್ನಿಸಿದರೂ ಕಾಲಚಕ್ರ ನಿಲ್ಲಿಸಲಾಗದು.

***ಮಾಂಧಾತಾ ಸ ಮಹೀಪತಿಃ ಕೃತಯುಗಾಲಂಕಾರಭೂತೋ ಗತಃ***
***ಸೇತುರ್ಯೇನ ಮಹೋದಧೌ ವಿರಚಿತಃ ಕ್ವಾಸೌ ದಶಾಸ್ಯಾಂತಕಃ ಅನ್ಯೇ***
***ಚಾಪಿ ಯುಧಿಷ್ಠಿರಪ್ರಭೃತಯಃ ಯಾತಾ ದಿವಂ ಭೂಪತೇ***
***ನೈಕೇನಾಪಿ ಸಮಂ ಗತಾ ವಸುಮತೀ ಮುಂಜ ತ್ವಯಾ. ಯಾಸ್ಯತಿ***

ಕೃತಯುಗಾಲಂಕಾರಪ್ರಾಯನಾದ ಮಾಂಧಾತ ಮಹಾರಾಜ ಹೋದ; ತ್ರೇತಾಯುಗದಲ್ಲಿ ಮಹಾಸಾಗರಕ್ಕೆ ಸೇತುವೆ ನಿರ್ಮಿಸಿ ರಾವಣನನ್ನು ಜಯಿಸಿದ ಆ ಮಹಾನುಭಾವ ರಾಮನೆಲ್ಲಿ? ದ್ವಾಪರಯುಗದಲ್ಲಿ ಮಹಿಯ ನ್ನಾಳಿದ ಧರ್ಮ ಮುಂತಾದ ರಾಜರು ಸ್ವರ್ಗಕ್ಕೆ ಹೋಗಿಯೇ ಬಿಟ್ಟರು! ಕಲಿಯುಗದಲ್ಲಿ ಆಳುತ್ತಿರುವ ಮುಂಜನೆ, ನೀನು ಮಾತ್ರ ಅವರಂತೆ ಈ ಭೂಮಂಡಲವನಿಲ್ಲಿಯೇ ಬಿಟ್ಟು ಹೋಗಲಾರೆ ಅಲ್ಲವೇ?

ಮಹಲಿನಂಥ ಹೊಸ ನಿವಾಸ ರಚಿಸಿದ ಯಜಮಾನ ಸುಖದ ಕನಸು ಕಾಣುತ್ತಾನೆ. ವೈಭವದ ಶಯನ ಕೋಣೆ, ವಿಸ್ತಾರವಾದ ಕಾರ್ಯಕೋಣೆಗಳಲ್ಲಿ ವಿಶ್ರಾಮ ವೃದ್ಧಾಪ್ಯವ ಕಳೆವ ಕನಸು ಕಾಣುತ್ತಾನೆ. ದಿನ ಕಳೆಯುತ್ತವೆ. ಮಕ್ಕಳು ದೊಡ್ಡವರಾಗುತ್ತಾರೆ. ಅವರ ಸಂಖ್ಯೆ ಬೆಳೆಯುತ್ತದೆ. ಮನೆ ತುಂಬುತ್ತದೆ. ಮುದುಕ ಯಜಮಾನ ಸ್ಥಾನಚ್ಯುತನಾಗುತ್ತಾನೆ. ತನ್ನ ಮನೆಯಲ್ಲೇ ಅವನಿಗೆ ಕೂಡಲು ನಿಲ್ಲಲು ಕೋಣೆಯಿಲ್ಲ, ಪೀಠವಿಲ್ಲ. ತಾನೇ ಕಟ್ಟಿಸಿಕೊಂಡಂಥ ಸುಂದರ ಮಹಲನ್ನು ಆತ ಒಂದು ದಿನ ತ್ಯಾಗ ಮಾಡಿ ಗುಡಿಗಳತ್ತ ಕಾಲು ಹಾಕುವ ಕಾಲ ಆರಂಭವಾಗುತ್ತದೆ. ಅದು 'ಆವರ್ತನ! ತಂದೆಯ ನಂತರ ಮಕ್ಕಳು ತಂದೆಯ ಸ್ಥಾನವನ್ನು ಆಕ್ರಮಿಸು ತ್ತಾರೆ. ಮಕ್ಕಳ ಸ್ಥಾನವನ್ನು ಮೊಮ್ಮಕ್ಕಳು ಆಕ್ರಮಿಸುತ್ತಾರೆ. ಇದು ಪದ್ಧತಿ ಜಗತ್ತಿನಲ್ಲಿ! ಯಾರೂ ಯಾವುದರಲ್ಲೂ ಶಾಶ್ವತವಾಗಿ ಇರಲಿಕ್ಕಾಗದ ನಿಯತಿ ಜಗತ್ತಿನಲ್ಲಿ. ಎಲ್ಲವೂ ಆವರ್ತನ ನಿಯಮಕ್ಕೆ ಒಳಗು. ಭಗವಂತನು ಸತ್ಯ ತತ್ತ್ವ, ಪರಿವರ್ತನೆಗೆ ನಿಲುಕದ ದಿವ್ಯ ವಸ್ತು. ಆದಿಯಿಲ್ಲವಾಗಿ ಅವನಿಗೆ ಅಂತ್ಯವಿಲ್ಲ. 'ಅನಾವರ್ತನೀಯ!' ಆವರ್ತನೆಗೆ ಒಳಗಾದ ವಿಶ್ವದ ಅಂತ ರಂಗದಲ್ಲಿಯೇ ಈ ಅವಿಚಲ ದೇವ ನೆಲೆಸಿದ್ದಾನೆ. ಬದಲಾವಣೆ ಹೊಂದುತ್ತಿರುವ ವಸ್ತುಗಳ ಮಧ್ಯ ಆ ದೇವ ನನ್ನು ಗುರುತಿಸುವುದೇ ಒಂದು ಬಗೆಯ 'ಭಗವಚ್ಚಿಂತನ!' ಕೌಮಾರ, ಯೌವನ, ಜರೆ, ಮರಣಗಳಲ್ಲೂ ಅಮೃತವಾಗಿ ನೆಲೆ ನಿಂತ 'ಆತ್ಮ', 'ದೇವ'ನ ಅರಿತು ಬದುಕುವುದು 'ಜೀವನ್ಮುಕ್ತ' ಸ್ಥಿತಿ!

ಆವರ್ತನದ ಅರಿವಿದ್ದು ಬದುಕುವುದು ಪವಿತ್ರ ಜೀವನ. ಆವರ್ತನದ ಅರಿವಿರದೆ ಬದುಕುವುದು ಸಾಂಸಾರಿಕ ಜೀವನ.

ಬಹಳ ಹಿಂದೆ ಯುರೋಪು ದೇಶದೊಳಗೆ ಒಬ್ಬ ದೊಡ್ಡ ಪ್ರಭಾವಿ ವ್ಯಕ್ತಿ ಇದ್ದ. ದೇಶದಲ್ಲಿ ಅನೇಕ ಸುಧಾರಣೆ ಗಳನ್ನು ಮಾಡಿದ. ಜನ ಆತನನ್ನು ಕೊಂಡಾಡಿದರು. ಎಲ್ಲ ಕೂಡಿ ಒಂದು ನಿರ್ಣಯ ಮಾಡಿದರು, ಅವನ ಒಂದು ದೊಡ್ಡ ಪ್ರತಿಮೆಯನ್ನು ಸ್ಥಾಪಿಸಬೇಕೆಂದು. ಹಾಲುಗಲ್ಲಿ ನೊಳಗೆ ಹತ್ತು–ಹದಿನೈದು ಅಡಿ ಮೂರ್ತಿಯನ್ನು ಕೆತ್ತಿಸಿದರು. ಅದ್ಭುತಮೂರ್ತಿ. ಅದನ್ನು ನಿಲ್ಲಿಸುವ ದಿನ ಬಂತು. ಅವನಿಗೆ ಬಹಳ ಸಂತೋಷ ಆಗಿತ್ತು. ತನ್ನ ಮೂರ್ತಿ ಊರಮಧ್ಯದ





ಕೂಟಸ್ಥಾನದೊಳಗೆ ಶಾಶ್ವತವಾಗಿ ನಿಲ್ಲುವುದು. ಹೋಗುವ ಬರುವ ಪ್ರತಿಯೊಬ್ಬ ತನ್ನ ಹ್ಯಾಟು ತೆಗೆದು ವಂದನೆಗಳನ್ನು ಸಲ್ಲಿಸುವ ಕ್ಷಣಗಳನ್ನು ನೆನೆಸಿ ಕೊಂಡು ಹರ್ಷಪಟ್ಟ. ರಾತ್ರಿ ಹತ್ತು–ಹನ್ನೊಂದು ಗಂಟೆ ಆಗಿತ್ತು. ಹೊರಗೆಲ್ಲಾ ಬೆಳದಿಂಗಳು ಹರವಿತ್ತು. ಆ ಮೂರ್ತಿ ಯನ್ನೊಮ್ಮೆ ನೋಡಿ ಆನಂದಿಸ ಬೇಕೆನಿಸಿತು. ಎದ್ದು ಹೊರಟ. ಮೂರ್ತಿಯ ಸಮೀಪಕ್ಕೆ ಹೋದ. ಎತ್ತರವಾದ ಮೂರ್ತಿ. ಬೆಳದಿಂಗಳು. ಆತ ಒಂದೊಂದೇ ಮೆಟ್ಟಿಲು ಏರಿ ಏರಿ ಮೂರ್ತಿಯ ಪದತಲದಲ್ಲಿ ನಿಂತ. ಬಹಳ ಸುಂದರವಾದ ಮೂರ್ತಿ! ಸಂತೋಷ ಭರಿತನಾದ. ಕಟ್ಟೆಯ ಮೇಲೆ ಕುಳಿತ. ಕೆಳಗೆ ಪಾವಟಿಗೆಯ ಮೇಲೆ ಕಾಲಿಟ್ಟಿದ್ದ. ಎಲ್ಲಿಂದಲೋ ಕತ್ತಲೆಯ ಬೆಳಕಿನೊಳಗಿಂದ ಧ್ವನಿ ಬಂತು. ನಗುವ ಧ್ವನಿ ಕೇಳಿಬಂತು. ಆತ ಆ ಕಡೆ ಈ ಕಡೆ ಯಾರಾದರೂ ಇದ್ದಾರೇನೋ ಎಂದು ನೋಡಿದ. ಯಾರೂ ಇರಲಿಲ್ಲ. ಮತ್ತೆ ನಗುವ ಧ್ವನಿ. ತನ್ನ ಕಾಲ್ಕೆಳಗೇ ನಕ್ಕಂತಾಯಿತು. 'ಏನು?' 'ಯಾರು?' ಕೇಳಿದ. ಕಾಲ ಕೆಳಗೆ ಒಂದು ದೊಡ್ಡ ಕಲ್ಲು ಹಾಕಿದ್ದರು. ಆ ಕಲ್ಲು ಹೇಳಿತು, 'ನಾನೇ ನಗುವವ ಇಲ್ಲಿದ್ದೇನೆ. ನಾನು ಮೊದಲು ಹೀಗೇ ಇದ್ದೆ. ಇದೇ ಸ್ಥಾನದಲ್ಲೇ ಹೀಗೆ ನಿಲ್ಲಿಸಿದ್ದರು ನನ್ನನ್ನು. ನಿನ್ನೆ ತೆಗೆದು ಇಲ್ಲಿ ಹಾಕಿ ಪಾವಟಿಗೆ ಕಟ್ಟಿದ್ದಾರೆ. ನನಗಿಂತಲೂ ಮೊದಲಿನವನನ್ನು ಕೆಳಗಿನ ಪಾವಟಿಗೆಗೆ ಹಾಕಿದ್ದಾರೆ. ಅದಕ್ಕಿಂತ ಕೆಳಗಿನ ಪಾವಟಿಗೆಯಲ್ಲಿ ಮತ್ತೊಬ್ಬನನ್ನು ಹಾಕಿ ದ್ದಾರೆ. ಇಂದು ನಿನ್ನ ಸರತಿ. ನಿನ್ನೆ ನನ್ನ ಸರತಿ. ಮೊನ್ನೆ ನಮ್ಮ ಕೆಳಗಿನವನ ಆವರ್ತನ. ಆದರೆ ಒಂದು ಕ್ಷಣ, ಗೊತ್ತಿರಲಿ, ನಾನು ಯಾಕೆ ನಕ್ಕೆ ಗೊತ್ತೆ? ಹಿಂದೆ ನಾನು ನಿನ್ನಂತೆ ಬಂದು ಇಲ್ಲಿ ಕೂತು ಸಂತೋಷಪಡುತ್ತಿದ್ದೆ. ಅಷ್ಟರಲ್ಲಿ ಕೆಳಗಿನ ಕಲ್ಲು ನಕ್ಕಿತು. ನನಗೆ ಬುದ್ಧಿ ಬಂದಿತ್ತು. ನೆನಪಾಗಿ ನಕ್ಕೆ. ನೀನು ನಾಳೆ ಏನು ಆಗುತ್ತೀಯಲ್ಲ ಅದನ್ನು ಕಲ್ಪಿಸಿ ನಕ್ಕೆ. 'ಇದು ಎಲ್ಲರ ಕತೆ. ಆವರ್ತನಶೀಲ ಜಗತ್ತಿ ನೊಳಗೆ ಯಾವುದನ್ನೂ ಬಹಳಷ್ಟು ತಲೆಗೆ ಹಚ್ಚಿಕೊಳ್ಳ ಬಾರದು. ಇದು ನಮ್ಮೆಲ್ಲರ ಜೀವನ.

ನನ್ನ ಜೀವನವೂ ಅಷ್ಟೇ! ನಾನು ಈಗ ಈ ಸ್ಥಾನದಲ್ಲಿ ಕುಳಿತಿದ್ದೇವೆ. ಬೇರೆ ಇನ್ನೊಬ್ಬ ನಾಳೆ ಬಂದು ಕೂಡುತ್ತಾನೆ. ನಾನು ಇಳಿಯಬೇಕಾಗುತ್ತದೆ. ಇಳಿಯದೇ ಇದ್ದರೆ ಇಳಿಸು ತ್ತಾರೆ. ನಾನು ಇಳಿಯಬೇಕಾಗುತ್ತದೆ, ಆತ ಕೂಡುತ್ತಾನೆ. ಕಾಲ ಬಂದು ಅವನನ್ನೂ ಇಳಿಸುತ್ತದೆ. ಈಗ ಕುಳಿತಾಗಲೇ ಭಾವಿಸಿಕೊಂಡಿರಬೇಕು, ನಾನು ಇಳಿಯಬೇಕಾಗುತ್ತದೆ ಎಂದು. ಅರಿತು ಕುಳಿತಿರುವುದೇ ಪರಮಾರ್ಥ. ಅಧಿಕಾರ ಸ್ಥಾನದಲ್ಲಿ ಕೂಡಬಾರದು ಎಂದಲ್ಲ. ಇಳಿಯಬೇಕಾಗುತ್ತದೆ ಎಂದು ತಿಳಿದುಕೊಂಡು ಕೂಡಬೇಕು. ಟ್ರೇನಿನಲ್ಲಿ ಮೆತ್ತನೆಯ ಪೀಠದ ಮೇಲೆ ಕುಳಿತಿರುತ್ತೇವೆ. ಎಷ್ಟು ಕಾಲ? ನಮ್ಮ ಇಳಿಯುವ ತಾಣ ಬರುವವರೆಗೆ. ನಮ್ಮಂತೆ ಸಾವಿರಾರು ಜನ ಅದರ ಮೇಲೆ ಮಲಗಿದ್ದಾರೆ, ಕೂತಿದ್ದಾರೆ. ಶಾಶ್ವತವಾಗಿ ಯಾರೂ ಕೂಡರು. ಎಲ್ಲ ಟಿಕೇಟುಗಳೂ ಕಾಲಮಿತ!!

ಸಂನ್ಯಾಸಿಯೋರ್ವ ಅರಮನೆಗೊಳಗೆ ಬಂದು ಮಲಗಿಕೊಂಡಿರುತ್ತಾನೆ. ರಾಜ ಬಂದು ನೋಡಿ ರೇಗುತ್ತಾನೆ. 'ಇದೇನು ಧರ್ಮಶಾಲೆಯೋ?' ಆಗ ಸಂನ್ಯಾಸಿ ಕೇಳಿದ 'ಮತ್ತೇನು? ಮೊದಲು ಇಲ್ಲಿ ನಿಮ್ಮ ಅಜ್ಜ ವಾಸಿಸಿದ್ದ. ಆತ ಹೋದ. ನಿಮ್ಮ ತಂದೆ ತಂಗಿದ. ಆತನೂ ಹೋದ, ಎಂದಿಗೂ ತಿರುಗಿ ಬಾರದಂತೆ. ಈಗ ನಿನ್ನ ಸರತಿ. ನೀನೂ ಒಂದು ದಿನ ಹೋಗಬೇಕು ಇದನ್ನೆಲ್ಲಾ ಬಿಟ್ಟು, ಹೀಗಿರು ವಾಗ ಇದು ಧರ್ಮಶಾಲೆ ಏಕಲ್ಲ? 'ಮಾರ್ಮಿಕ ಕಥೆಯಿದು. ನಾವೆಲ್ಲ ಕಥೆ ಓದಿದ್ದೇವೆ. ಆದರೆ ಕಥೆಯ ಇಂಗಿತ ನಮ್ಮ ಮೈಗೂಡಿಲ್ಲ. ಪ್ರಸಂಗ ಬಂದಾಗ ಅದು ನೆನಪಾಗದು. ಶಾಶ್ವತತೆಯ ಭ್ರಮೆ ಮನುಷ್ಯನಿಗೆ ತಗುಲಿಕೊಂಡಿದ್ದರಿಂದ ಆ ಮನುಷ್ಯ ಇನ್ನಷ್ಟು ಕಷ್ಟಕ್ಕೊಳಗಾದ.

ಬಸವಣ್ಣ ಹತ್ತು–ಇಪ್ಪತ್ತು ವರ್ಷಗಳ ಕಾಲ ಸಚಿವ ಕಿರೀಟವನ್ನು ಹಾಕಿಕೊಂಡಿದ್ದ. ಕಲ್ಯಾಣದೊಳಗೆ ಅನಭಿಷಿಕ್ತ ದೊರೆಯಾಗಿ ಬಾಳಿಕೊಂಡಿದ್ದ. ತನ್ನ ಎಲ್ಲ ಧರ್ಮ ಸಾಮ್ರಾಜ್ಯವನ್ನು ನಿರ್ಮಿಸಿದ್ದ. ಇಂತಹ ಬಸವಣ್ಣ ಆ ಊರು ಬಿಟ್ಟು ಹೋಗುವ ಪ್ರಸಂಗ ಬಂದಾಗ ಒಂದಿಷ್ಟೂ ವಿಚಲಿಸದೆ ಕಿರೀಟ ಕೆಳಗಿಟ್ಟ, ಬಟ್ಟೆಗಳನ್ನು ಕಳಚಿದ. ಹಿಂದೆ ತಿರುಗಿ ನೋಡದೆ ಆ ಊರ ತೊರೆದ. ಬಟ್ಟೆಗೆ ಹತ್ತಿದ ಒಂದು ಕಡ್ಡಿಯನು ಹೇಗೆ ಸರಿಸಿ ಮುಂದೆ ಹೋಗಿಬಿಡು ತ್ತಾರೆಯೋ ಹಾಗೆ! ಕಿರೀಟ ತೆಗೆದು ಇಟ್ಟು ಕೂಡಲಸಂಗಮ ನತ್ತ ಹೊರಟುಹೋದ. ಎಷ್ಟು ನಿರ್ಲಿಪ್ತವಾಗಿರಬೇಕು! ಅವನಿಗೆ ಗೊತ್ತಿತ್ತು, ಜಗತ್ತು ಇದು ಆವರ್ತನಶೀಲ ಎಂದು. ಈ ಕುರ್ಚಿ ಮೇಲೆ ತನಗಿಂತ ಮೊದಲು ಒಬ್ಬರು ಕುಳಿತಿದ್ದರು, ಈಗ ತಾನು, ಆತ ತ್ಯಜಿಸಿದಂತೆ ತಾನೂ ತ್ಯಜಿಸಬೇಕು, ಎಂಬ ಭಾವದಿಂದ ಕುಳಿತಿದ್ದ. ಆದ್ದರಿಂದ ಅದನ್ನು ಬಿಡುವಾಗ ಮನಸ್ಸಿಗೆ ನೋವಾಗಲಿಲ್ಲ. ಬಸವಣ್ಣನನ್ನು ಯಾಕೆ

ಕೊಂಡಾಡುತ್ತೇವೆ ಎಂದರೆ ತ್ಯಾಗಮೂರ್ತಿ ಯಾಗಿದ್ದನಾತ! ಯಾವ ಕ್ಷಣದೊಳಗಾದರೂ ತ್ಯಾಗ ಮಾಡ ಬಲ್ಲೆ ಅನ್ನುವ ಮನಃಸ್ಥಿತಿ ಇತ್ತು. ನಾವು ಅಧಿಕಾರಸ್ಥಾನ ಬಿಡುವಾಗ ಎಂತಹ ಕೋಲಾಹಲ! ಜಗಳವೆಷ್ಟು, ಅದೊಂದು ದೊಡ್ಡ ಹಗರಣ! ಎಂ.ಪಿ.ಗಳು, ಎಂ.ಎಲ್.ಎ. ಗಳು ಆ ಪದವಿ ಹೋದರೂ ವಾಸ ಮಾಡುವ ರಾಜಮನೆಗಳನ್ನು ಇನ್ನೂ ಬಿಟ್ಟಿಲ್ಲ. ಅನೇಕ ತಿಂಗಳು ಉರುಳಿಹೋಗಿವೆ. ಬಿಟ್ಟಿಲ್ಲ. ಭವ್ಯ ಮನೆಗಳನ್ನು ಹೇಗೆ ಬಿಡಲಿಕ್ಕೆ ಆಗುತ್ತದೆ?

ಮನುಷ್ಯ ತತ್ತ್ವಜ್ಞಾನಿ ಆಗಬೇಕಾದರೆ ಈ ತತ್ತ್ವವನ್ನು ಅರ್ಥಮಾಡಿ ಕೊಂಡಿರಬೇಕು. ಈ ಜಗತ್ತು ಆವರ್ತನಾಶೀಲ ವಾಗಿದೆಯೆಂದು. ಬಹಳ ಸುಲಭ ಸೂತ್ರ ಇದು. ಆವರ್ತನಾ ಸೂತ್ರ. ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ, ಯಾರದೂ ಸ್ಥಿರವಲ್ಲ, ಯಾವುದೂ! ಈ ಜಗತ್ತು ಹುಟ್ಟಿ ದಂದಿನಿಂದ ಅತ್ತೆ-ಸೊಸೆ ಪ್ರವಾಹ ಸಾಗಿ ಬಂದಿದೆ. ಯಾರೂ ಸ್ಥಿರ ಅತ್ತೆಯರೂ ಅಲ್ಲ, ಯಾರೂ ಸ್ಥಿರ ಸೊಸೆಯರೂ ಅಲ್ಲ.

ಗಡಿಯಾರ ತಿರುಗುತ್ತಿರುತ್ತದೆ. ಹಾಗೆ ಜೀವನಚಕ್ರ ತಿರುಗುತ್ತಿರುತ್ತದೆ. ಗಡಿಯಾರ ನಿಲ್ಲಿಸಬಹುದು, ಬೇಕಾದ ವೇಳೆಗೆ ನಿಲ್ಲಿಸಬಹುದು. ಆದರೆ ಜೀವನದ ಗಡಿಯಾರ ನಿಲ್ಲಿಸಲಾಗದು. ಎಂತಲೇ ಎಲ್ಲ ಚೆನ್ನಾಗಿದೆ. ಎಲ್ಲರಿಗೂ ಬೇಕಾದಾಗ ನಿಲ್ಲಿಸುವ ಸ್ವಾತಂತ್ರ್ಯವಿದ್ದಿದ್ದರೆ ಎಲ್ಲ ಅಸ್ತವ್ಯಸ್ತ ವಾಗುತ್ತಿತ್ತು ಜಗತ್ತು. ಒಬ್ಬ ಸೂರ್ಯನ ನಿಲ್ಲಿಸಿಬಿಟ್ಟ, ಒಬ್ಬ ಚಂದ್ರನ ನಿಲ್ಲಿಸಿಬಿಟ್ಟ, ಒಬ್ಬ ಗಾಳಿ ಮಳೆ ನಿಲ್ಲಿಸಿಬಿಟ್ಟ, ಗತಿ ಏನಾಗಬೇಡ? ನಮ್ಮ ಮಾತು ಕೇಳದಂತೆ ಚಳಿಗಾಲ, ಬೇಸಿಗೆ, ಮಳೆಗಾಲ ಅವು ತಮ್ಮಷ್ಟಕ್ಕೆ ತಾವು ತಿರುಗಿಕೊಂಡಿರು ತ್ತವೆ. ಆದರೂ ಮನುಷ್ಯನಿಗೆ ಆವರ್ತನ ಮೀರುವ ಭ್ರಮೆ. ಚಿರವಾಗಿರುವ ಯತ್ನ.

ನಿವೃತ್ತಿಯ ವಯಸ್ಸು ಐವತ್ತು ಇತ್ತು. ಐವತ್ತೈದು ಆಯಿತು. ಈಗ ಐವತ್ತೆಂಟು ಆಗಿದೆ. ಇನ್ನೆರಡು ವರ್ಷ ಸಿಕ್ಕರೆ ಅರವತ್ತು. ರಿಟಾಯರ್ಡ್ ಆಗುವ ಮನಸ್ಸೆಲ್ಲಿ? ಸಾಯುವವರೆಗೆ ಅಲ್ಲೇ ಇರಬೇಕು ಎಂದು ಎಣಿಕೆ ಹಾಕುವ ಮನುಷ್ಯನಿಗೆ ಆವರ್ತನ ಚಕ್ರದಿಂದ ಹೊರಗೆ ಬರಲು ಹೇಗೆ ಸಾಧ್ಯವಾಗುತ್ತದೆ? ನಾವು ಯಾವಾಗಲೂ ಬಿಡಲು ಸಿದ್ಧರಿರಬೇಕು. ಮನೆ ಬಿಟ್ಟು ಹೊರಗೆ ಹೋಗುವಾಗ ನಾವು ಮನೆಗೆ ತಿರುಗಿ ಬರುತ್ತೇವೆ ಎಂಬ ಭಾವ ಕೂಡ ತರದೆ ಹೋಗುವುದು. ನಿಶ್ಚಿಂತ. ಇದ್ದಲ್ಲಿಯೇ ನಿಶ್ಚಿಂತ. ಹಾಗೆ ಬದುಕುವಾತನೇ ಸಂತ. ಹಾಗಿರದವ ಸಂಸಾರಿ, ಲಗ್ನ ಆದವ ಸಂಸಾರಿ, ಲಗ್ನ ಆಗದವ ಸಂನ್ಯಾಸಿ ಎಂದಲ್ಲ. ಯಾರು ಸ್ವಚ್ಛಂಧವಾಗಿ ಬದುಕುತ್ತಾರೆಯೋ ಅವರೇ ಸಂತರು. ಯಾರು ಕಲ್ಪನೆಯ ಜಾಲದಲ್ಲಿ ಸಿಲುಕಿದ್ದಾರೆ, ಅವರು ಸಂಸಾರಿಗಳು. ಆವರ್ತನೆಯ ಪ್ರಪಂಚ-ಜಾಲ! ಜಾಲದಿಂದ ಹೊರಗೆ ಬಂದಾತನೇ ಮುಕ್ತ. ಆ ಜಾಲದಲ್ಲಿ ಸಿಕ್ಕಿಬಿದ್ದವನೇ ಪ್ರಾಪಂಚಿಕ. ಇದನ್ನು ಅರ್ಥ ಮಾಡಿಕೊಂಡು ನಿರಾಭಾರಿಯಾಗಿ ಬದುಕುವುದು.

ಮನೆಗೆ ಯಾರಾದರೂ ದೊಡ್ಡವರು ಬಂದರೆ ಕೂಡಲೆ ನಮ್ಮ ಜಾಗ ಬಿಟ್ಟು ಅವರನ್ನು ಅಲ್ಲಿ ಕೂಡಿಸುತ್ತೇವೆ. ಯಾಕೆ? ಅವರು ಬಿಟ್ಟು ಹೋಗುತ್ತಾರೆ ಎಂಬ ಭರವಸೆ. ಮನೆಗೆ ಬಂದ ಆ ಮಹಾನುಭಾವ ಶಾಶ್ವತ ಇರುತ್ತಾನೆ ಎಂದೆನಿಸಿದರೆ ಅವನನ್ನು ಕರೆಯುವವರು ಯಾರು? ನಾವೆಲ್ಲ ಅತಿಥಿಗಳು! ಎಲ್ಲರೂ; ನಾನು ನಿಮಗೆ ಅತಿಥಿ, ನೀವು ನನಗೆ ಅತಿಥಿ. ನೀವು ನನ್ನನ್ನು ಗೌರವಿಸುವುದು, ನಾನು ನಿಮ್ಮನ್ನು ಗೌರವಿಸುವುದು! ಪರಸ್ಪರ ಗೌರವಿಸುತ್ತಾ ಬಾಳುವುದು ಅದರಲ್ಲಿ ಉಭಯರ ಶ್ರೇಯಸ್ಸು. ಈ ಶ್ರೇಯಸ್ಸಿಗಾಗಿ ಭಗವಚ್ಚಿಂತನ.

'ನಾನು ಏರುವವನೂ ಅಲ್ಲ, ಇಳಿಯುವವನೂ ಅಲ್ಲ. ಏರೋದು ಇಳಿಯೋದು ಅದು ಭೌತಿಕ, ಸಾಮಾಜಿಕ! ಆದರೆ ಅಂತರಂಗದಲ್ಲಿರುವ ಆತ್ಮವಸ್ತು ಯಾವುದನ್ನು ಏರು ವುದೂ ಇಲ್ಲ, ಯಾವುದನ್ನು ಇಳಿಯುವುದೂ ಇಲ್ಲ. 'ಇಷ್ಟು ನಿರ್ಲಿಪ್ತವಾಗಿ ಮನುಷ್ಯ ಒಬ್ಬ ಅತಿಥಿಯಂತೆ ವಾಸಮಾಡಲು ಕಲಿತರೆ ಅದು ಭಗವತ್ ಜೀವನ. ಅದು ಪವಿತ್ರ ಜೀವನ. ಜೀವನ ದಿವ್ಯ ಆಯಿತು. ಇಂತಹ ದಿವ್ಯ ಜೀವನದವ ಆರಾಮ ಇರುತ್ತಾನೆ. ಆದರೇನು? ಹೀಗೆ ಇರಲು ಆಗದು. ದೊಡ್ಡವರನ್ನು ಕಂಡು ಮನಸ್ಸಿಗೆ ತಾಪ! ಹಾಗಾಗಬೇಕೆಂಬ ಬಯಕೆ. ಆಗದೆಂಬ ಸಂಕಟ. ಅದಕ್ಕಾಗಿ ಅನ್ಯಾಯದ ಧನಾರ್ಜನ ವಿಧಾನ ಅನುಸರಿಸುತ್ತನೆ. ಆಸೆ ಅತಿಯಾಯಿತು -ಬದುಕಿನ ನೆಮ್ಮದಿ ಮರೆ.

ನಾವು ಯಾವಾಗಲೂ ಒಂದು ಭ್ರಮಣ ಚಕ್ರ ನೆನೆಸ ಬೇಕು. ಜಾತ್ರೆಯೊಳಗೆ ಚಕ್ರದ ತೊಟ್ಟಿಲು ಮಾಡಿರುತ್ತಾರೆ.





ಕೆಳಗಿನ ತೊಟ್ಟಿಲು ಮೇಲೆ ಹೋಗುತ್ತದೆ, ಮೇಲಿನ ತೊಟ್ಟಿಲು ಕೆಳಗೆ. ಅದರಲ್ಲಿ ಕುಳಿತು ನೋಡಿ. ಏರುವಾಗ ಎಷ್ಟು ಆನಂದವಾಗುತ್ತದೆ. ಅದು ಅತಿ ತುಟ್ಟ ತುದಿಗೆ ಹೋದ ಬಳಿಕ ಜಗತ್ತಿನ ಎತ್ತರ. ಇಳಿಯಬಾರದೆಂಬ ಗೇನಿಕೆ. ಆದರೆ ಚಕ್ರ ನಿಲ್ಲದು. ಕೆಳಗಿನವ ಮೇಲೆ ಬರಬೇಕು! ಆದ್ದರಿಂದ ಮೇಲಿನವ ಕೆಳಗಿಳಿಯಬೇಕು. ನಮ್ಮ ತೊಟ್ಟಿಲು ಎಂದೆಂದಿಗೂ ಮೇಲೆ ಇರಬೇಕು ಎಂಬ ಕನಸು ಕಾಣ ಬಾರದು. ಅದು ಚಲಿಸುತ್ತದೆ. ಅದು ಮೇಲೆ ಹೋದರೂ ಸಂತೋಷ ಪಡಬೇಕು. ಕೆಳಗೆ ಬಂದರೂ ಸಂತೋಷಪಡಬೇಕು.

ಅಕ್ಷತೆ ಆದ ಬಳಿಕ ಮೆರವಣಿಗೆ. ವಧೂವರರು ರಥದ ಮೇಲೆ. ಶೃಂಗಾರ. ಎಲ್ಲ ಜನ ನಡೆಯುತ್ತಿದ್ದಾರೆ. ಇವರು ಮೇಲೆ ಕುಳಿತಿರುತ್ತಾರೆ. ಹೂವಾಲೆಗಳು! ಜನ! ಕುಣಿಯುವವರು. ಹಾಡುವವರು. ಇದೆಲ್ಲಾ ನೋಡಿ ಅವರಿಬ್ಬರಿಗೆ ಅನ್ನಿಸುತ್ತದೆ, ಮೆರವಣಿಗೆ ಎಂದೂ ಮುಗಿಯಬಾರದು! ನಡೆಯುವವರು ಅನ್ನುತ್ತಾರೆ ಯಾವಾಗ ಮನೆಗೆ ಬಂದೀತು ಎಂದು. ಮೇಲೆ ಕುಳಿತವರಿಗೆ ಮುಗಿಯಬಾರದು! ಕೆಳಗೆ ಇದ್ದವರಿಗೆ ಬೇಗೆ ಮುಗಿಯ ಬೇಕು! ಇದೇ ಜಗತ್ತು! ಈ ದೃಶ್ಯವನ್ನು ಯಾವಾಗಲೂ ದೃಷ್ಟಿಯೊಳಗೆ ಇರಿಸಿದರೆ ಜೀವನ ಬಹಳ ಅಪ್ಯಾಯಮಾನ. ವಿದ್ಯೆ, ಶಕ್ತಿ ಎಲ್ಲವೂ ಹುಲ್ಲು ಬೆಂಕಿಯಂತೆ. ಅದೆಷ್ಟು ಹೊತ್ತು ಅವು? ಅದು ಕಲ್ಲಿದ್ದಿಲಿನ ಬೆಂಕಿ ಅಲ್ಲ. ಆದ್ದರಿಂದ ಮನುಷ್ಯ ತಿಳಿದುಕೊಂಡು ಆರಾಮಾಗಿ ಇರಬೇಕು. ಎದುರಿಗೆ ಯಾವುದಾದರೊಂದು ಒಂದು ಮಾರುತಿ ಗಾಡಿ ಹೋಯಿತು ಎನ್ನಿ; ಆಗ ಭಾವಿಸಿ-ಬೇಕಾದಷ್ಟು ಓಡಲಿ; ಒಂದು ಕಡೆ ನಿಲ್ಲಲೇ ಬೇಕಲ್ಲ. ರಾಕೆಟ್‌ನಲ್ಲಿ ಯಾರಾದರೂ ಹಾರಿದರೆ ಒಂದು ದಿನ ಇಳಿಯಲೇ ಬೇಕಲ್ಲ! ಬದುಕೆಂದರೆ ಓಡಿ ನಿಲ್ಲುವುದು; ಏರಿ ಇಳಿಯುವುದು. ಇದನ್ನು ಅರಿತರೆ ಏರಬೇಕು ಎನ್ನಿಸುವುದಿಲ್ಲ; ಏರಬಾರದೂ ಎಂದೆನಿಸು ವುದಿಲ್ಲ. ಎಲ್ಲ ಸುಲಭ. ಪ್ರಸಂಗ ಅವಧಾನಿಯಾಗಿ ಬದುಕು ವುದು. ಅದು ನಿರಾಮಯ ಬದುಕು. ಜ್ಞಾನಿ ಬದುಕು. ಅದಕ್ಕಾಗಿ ಚಿಂತನ.

ಭಗವಂತನ ಅನಾವರ್ತದ ಚಿಂತನೆಯ ನಂತರ ಆವರ್ತನ ಜಗತ್ತಿನಲ್ಲಿ ಬದುಕುವ ಒಂದು ಸ್ಥಿತಿ ಇದು. ಈ ಆವರ್ತನ ಸೂತ್ರವನ್ನು ಬದುಕಿನಲ್ಲಿ ಬಳಸಬೇಕು. ಆವರ್ತನೆ ಯನ್ನು ಎಲ್ಲೆಡೆ ನೋಡುವುದು ಅದು ಸಂತಸ ಕೊಡುತ್ತದೆ. ಇದು ಇಂದಿನ ಚಿಂತನ. ಆವರ್ತನವೇ ಜೀವನ. ಅನಾವರ್ತನವೇ ಆತ್ಮಚೇತನ. ಆವರ್ತನದ ಜೀವನವನ್ನು ಸಾಗಿಸುವಾಗಲೇ, ಅನಾವರ್ತನ ಚೇತನದ ಚಿಂತನ! ಅನಾವರ್ತನ ಚೇತನ ಚಿಂತನೆಯೊಂದಿಗೆ ಆವರ್ತನ ಬದುಕನ್ನು ಬಾಳಿಕೊಂಡಿರುವುದೇ ಮುಕ್ತಾವಸ್ಥೆ! ಇದು ಜೀವನ ಮುಕ್ತಾವಸ್ಥೆ!

ಆನೆಯನೇರಿಕೊಂಡು ಹೋದಿರೆ ನೀವು?
ಕುದುರೆಯನೇರಿಕೊಂಡು ಹೋದಿರೆ ನೀವು?
ಕುಂಕುಮ ಕಸ್ತೂರಿಯ ಪೂಸಿಕೊಂಡು, ಹೋದಿರೆ ಅಣ್ಣಾ
ಸತ್ಯದ ನಿಲವನರಿಯದೆ ಹೋದಿರಲ್ಲಾ!
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ,
ಅಹಂಕಾರವೆಂಬ ಸದಮದ ಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲ ಸಂಗಮ ದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ.

– ಬಸವಣ್ಣ

# ಜನಪದರು ಕಂಡ ಬಸವಣ್ಣ

– ಎಚ್.ಎಸ್. ಸಿದ್ಧಗಂಗಪ್ಪ *

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಚಳುವಳಿ ಕರ್ನಾಟಕದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಬಸವಣ್ಣನವರು ವೈಚಾರಿಕ ಚಿಂತನೆ, ಸಾಮಾಜಿಕ ಕಳಕಳಿ, ವಿಶ್ವಭ್ರಾತೃತ್ವ, ಅನ್ಯಾಯದ ವಿರುದ್ಧ ಪ್ರತಿಭಟನೆ, ಕೆಳಸ್ತರದ ಜನರನ್ನು ಮುಖ್ಯವಾಹಿನಿಗೆ ತರುವ ಹೃದಯ ವೈಶಾಲ್ಯತೆ –ಇವೇ ಮೊದಲಾದ ಅವರ ಸಮಾಜ ಹಿತಚಿಂತನೆಗಳು ಜನರ ಮೇಲೆ ಗಾಢವಾದ ಪ್ರಭಾವ, ಪರಿಣಾಮ ಬೀರಿದುವು. ಕಳೆದ ಎಂಟುನೂರು ವರ್ಷಗಳಿಂದ ಹರಿಹರ, ರಾಘವಾಂಕ, ಚಾಮರಸ, ಭೀಮಕವಿ ಮೊದಲಾದ ಕವಿಗಳು, ದಾರ್ಶನಿಕರು, ಸಮಾಜವಿಜ್ಞಾನಿಗಳು, ಆರ್ಥಿಕ ತಜ್ಞರು, ಲೇಖಕರು, ವಿದ್ವಾಂಸರು, ಬಸವಣ್ಣನವರು ನಡೆಸಿದ ಚಳುವಳಿಯ ಒಳ–ಹೊರಗುಗಳನ್ನು ತಮ್ಮದೇ ಆದ ರೀತಿಯಲ್ಲಿ ಬಣ್ಣಿಸಿದ್ದಾರೆ, ವಿಶ್ಲೇಷಿಸಿದ್ದಾರೆ. ಅವರು ರಚಿಸಿದ ವಚನಗಳನ್ನು ಹಾಗೂ ಅವರ ವ್ಯಕ್ತಿತ್ವವನ್ನು ಕುರಿತು ಇದುವರೆಗೆ ನೂರಾರು ಗ್ರಂಥಗಳು ಪ್ರಕಟವಾಗಿವೆ, ಪ್ರಕಟವಾಗುತ್ತಿವೆ. ಬಸವಣ್ಣನವರು ಎಂದೂ ತಮ್ಮ ವಿಚಾರಗಳನ್ನು ಬಲವಂತವಾಗಿ ಬೇರೊಬ್ಬರ ಮೇಲೆ ಹೇರಿದವರಲ್ಲ. ಒಂಬತ್ತುನೂರು ವರ್ಷಗಳು ಕಳೆದರೂ ಅವರ ಸಮಾಜಮುಖಿ ಚಿಂತನೆಗಳು ಇಂದಿಗೂ ಪ್ರಸ್ತುತ. ಅವು ವಿಶ್ವಮಾನ್ಯವಾದವುಗಳು.

ಬಸವಣ್ಣನವರು ನಡೆಸಿದ ಸಾಮಾಜಿಕ ಆಂದೋಲನ ಪಂಡಿತರ ಮೇಲಷ್ಟೇ ಪ್ರಭಾವ ಬೀರಲಿಲ್ಲ. ಪಾಮರರ ಮೇಲೂ ಪ್ರಭಾವ ಬೀರಿತು ಎಂಬುದಕ್ಕೆ ಉತ್ತರ ಕರ್ನಾಟಕದಲ್ಲಿ ಇಂದಿಗೂ ಪ್ರಚಲಿತವಿರುವ ಹಂತಿ ಹಾಡುಗಳಲ್ಲಿ ಬಸವಣ್ಣನವರ ನಿಸ್ವಾರ್ಥ ಸೇವೆ, ಕಾಯಕ–ದಾಸೋಹ, ಜೀವನ ಸಾಧನೆ ಇವೇ ಮೊದಲಾದ ವಿವರಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ಜನಪದರರದು ಮುಗ್ಧಭಕ್ತಿ, ಕಪಟವನ್ನರಿಯದ ಶುದ್ಧ ಚಾರಿತ್ರ್ಯವುಳ್ಳವರು. ಕಂಡದ್ದನ್ನು ಕಂಡಹಾಗೆ, ಕೇಳಿದ್ದನ್ನು ಕೇಳುವ ಹಾಗೆ ಹೇಳುವ ನಿಷ್ಕಲ್ಮಷ ಹೃದಯವಂತಿಕೆಯುಳ್ಳವರು. ಅವರಿಗೆ ಬಸವಣ್ಣನನ್ನು ಕುರಿತು ಎಷ್ಟು ಹಾಡಿದರೂ ತೃಪ್ತಿಯಿಲ್ಲ. ಸುಗ್ಗಿ ಕಾಲದಲ್ಲಿ ಹಂತಿ ಕಾರ್ಯದಲ್ಲಿ ತೊಡಗಿರುವಾಗ ದಣಿವನ್ನು ಹಗುರ ಮಾಡಿಕೊಳ್ಳಲು ಹಂತಿ ಪದಗಳನ್ನು ಕಟ್ಟಿ ತಮ್ಮದೇ ಆದ ಧಾಟಿಯಲ್ಲಿ ಹಾಡಿ ಧನ್ಯತೆಯನ್ನು ಹೊಂದುತ್ತಾರೆ.

ಬಸವಣ್ಣನನ್ನು ನೆನೆಯುವುದೆಂದರೆ ಅವರಿಗೆ ಎಲ್ಲಿಲ್ಲದ ಸಡಗರ. ಶಿವನನ್ನು ಬಸವಣ್ಣನವರಲ್ಲಿ ಕಾಣುವ ತಾದ್ಯಾತ್ಮತೆ ಶಿವನನ್ನೇ ನೆನೆದಷ್ಟೇ ಪುಣ್ಯ ಬರುತ್ತದೆ ಎನ್ನುವ ಜನಪದರು–

*ಬಸವಣ್ಣ ನಿನ್ಹೆಸರು ದೆಶೆದೆಶೆಗೆ ಶಿವಮಂತ್ರ*
*ಹೊಸ ಮತಕೆ ಮಂತ್ರ ನಿತ್ಯದಲಿ – ಒಕ್ಕಲಿಗ*
*ಹೊಸ ಮಂತ್ರ ಬಸವ ಜಪಿಸುವನು.*

*ಉತ್ತಿ ಬಿತ್ತುವ ಮಂತ್ರ ಬಿತ್ತಿ ಬೆಳೆಯುವ ಮಂತ್ರ*
*ಸತ್ಯ ಶಿವಮಂತ್ರ ನಿನ್ಹೆಸರು – ಬಸವಯ್ಯ*
*ಮರ್ತ್ಯದೊಳು ಮಂತ್ರ ಜೀವನಕೆ.*

ಜನಪದರಿಗೆ ಬಸವಣ್ಣನವರು ನಡೆಸಿದ ಸಾಮಾಜಿಕ ಚಳುವಳಿ, ಸರ್ವರಿಗೂ ಸಮಾನತೆ, ಮೂಢನಂಬಿಕೆಗಳ ವಿರುದ್ಧ ಹೋರಾಟ ಇವುಗಳ ಬಗ್ಗೆ ಅರಿವಿದಿದ್ದರೂ ಅವರ ಬದುಕಿಗೆ ದಾರಿ ತೋರಿಸುವ ಕಾಯಕ ಮತ್ತು ದಾಸೋಹಗಳ ಬಗ್ಗೆ ಸ್ಪಷ್ಟವಾದ ಅರಿವಿದೆ. ಅವರಿಗೆ ಬೇಕಾದಾದು ಕೈತುಂಬ ಕೆಲಸ, ಹೊಟ್ಟೆ ತುಂಬ ಅನ್ನ. ಅವರ ದೃಷ್ಟಿಯಲ್ಲಿ ಕಾಯಕ ಮತ್ತು ದಾಸೋಹವನ್ನು ಕಲಿಸಿದವನು ಬಸವಣ್ಣನೆಂಬ ಅಚಲವಾದ ನಂಬಿಕೆ.

*ಕಾಯಕವ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸ ಮತಕೆ ಶಿವಭಕ್ತಿ – ಸಾರುದಕೆ*
*ರಾಯ ಜೀವನದ ಹೊಸ ನುಡಿಗೆ.*

ಬಸವಣ್ಣ ಕಾಯಕವನ್ನು ಕಲಿಸಿದ ನಾಯಕ ಮಾತ್ರವಲ್ಲ ಸಮಾನತೆಯ ತಳಹದಿಯ ಮೇಲೆ ಒಂದು ಹೊಸ ಮತವನ್ನೆ ಹುಟ್ಟು ಹಾಕುವುದರ ಮೂಲಕ ಶಿವಭಕ್ತಿಯನ್ನು ಜನಮಾನಸದಲ್ಲಿ ಬಿತ್ತಿದ ಎನ್ನುವ ಭಾವನೆ ಜನಪದರದು.

ಬಸವಣ್ಣನವರ ಬಾಲ್ಯ ವೃತ್ತಾಂತವನ್ನು ಎರಡು ತ್ರಿಪದಿಗಳ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ.

*ಹಡೆದವ್ವ ಮಾದವ್ವ, ಹಡೆದವ್ವ ಮಾದರಸು*
*ಪಡೆದವ್ವ ಅಕ್ಕನಾಗಾಯಿ – ಬಸವನಿಗೆ*
*ಬಿಡದೆ ಸಲುಹಿದನು ವರಸಂಗ.*

*ಬಸವ ನಿನಗೊಬ್ಬಣ್ಣ, ಬಸವಗೊಬ್ಬಳೆ ಅಕ್ಕ*
*ಬಸವ ನಿನ್ಹೆಸರು ಅವರಾತು – ಜಗಕೆಲ್ಲ*
*ಬಸವ ಕಲ್ಯಾಣ ಹೆಸರಾತು.*

ಬಸವಣ್ಣನವರಿಂದ ಬಸವ ಕಲ್ಯಾಣಕ್ಕೆ ಹೆಸರು ಬಂತು ಎಂದು ಹೇಳುವಲ್ಲಿ ಜನಪದರಿಗೆ ಬಸವಣ್ಣನವರು ದೊರೆ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದುದು ಬಸವಣ್ಣನವರು ಕೈಗೊಂಡ ಸಮಾಜ ಕಲ್ಯಾಣ ಕಾರ್ಯಗಳ ಅರಿವು ಇರುವುದು ವ್ಯಕ್ತವಾಗುತ್ತದೆ.

ಬಸವಣ್ಣನವರು ಪ್ರಾಮಾಣಿಕವಾಗಿ ಕಷ್ಟಪಟ್ಟು ದುಡಿಯಬೇಕು ಎಂಬುದನ್ನು ಕಲಿಸುವುದರ ಜೊತೆಗೆ ದುಡಿದುದರಲ್ಲಿ ಸ್ವಲ್ಪ ಭಾಗವನ್ನು ದಾಸೋಹ ರೂಪದಲ್ಲಿ ವಿನಿಯೋಗಿಸಬೇಕು ಎಂಬ ದಾಸೋಹ ತತ್ವವನ್ನು ಕಲಿಸಿಕೊಟ್ಟರು ಎಂದು ಕೃತಜ್ಞತೆಯಿಂದ ಸ್ಮರಿಸುತ್ತಾರೆ.

*ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು*
*ದೇಶ ದೇಶೆಲ್ಲ ಕೇಳುತಲಿ – ಹೊಸಮಾತ*
*ಮಾಸಿದವು ವೇದ ಹುಸಿಯೆಂದು.*

ಬಸವಣ್ಣ ದಾಸೋಹವನ್ನಷ್ಟೇ ನಮಗೆ ಕಲಿಸಲಿಲ್ಲ. ಜೊತೆಗೆ ವೇದಗಳು ಸುಳ್ಳು ಎಂಬುದನ್ನು ಮನವರಿಕೆ ಮಾಡಿಕೊಟ್ಟ ಎಂದು ಹೇಳಿದ್ದಾರೆ.

*ಓದಿದನು ಬಸವಯ್ಯ ವೇದದೊಳಗಿನ ಹುಸಿಯ*
*ಭೇದ ಭೇದವನೆ ಬಿಚ್ಚಿಟ್ಟ – ಜನಪದಕೆ*
*ತೇದುಂಡ ಜೀವಿ ಬಸವಣ್ಣ.*

ವೇದಗಳನ್ನು ಓದಿ ಅದರೊಳಗಿನ ಸಾರವನ್ನು ಅರ್ಥೈಸಿಕೊಂಡು ಅವೆಲ್ಲವೂ ಹುಸಿಯೆಂದು ಲೋಕ್ಕೆ ಸಾರಿದ. ಇದರಿಂದ ಜನ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಂಡು ಬಸವಣ್ಣನವರ ವೈಚಾರಿಕ ಚಿಂತನೆಗಳನ್ನು ಅರ್ಥಮಾಡಿಕೊಂಡರು.

ಜನಪದರ ದೃಷ್ಟಿಯಲ್ಲಿ ಬಸವಣ್ಣನವರು ಜನಿಸಿದ್ದೇ ಬಸವ ಕಲ್ಯಾಣವನ್ನು ಕಟ್ಟಿ ಬೆಳೆಸುವುದಕ್ಕೆ. ಬಸವಣ್ಣನವರಿಂದ ಬಸವಕಲ್ಯಾಣ ವಿಶ್ವವಿಖ್ಯಾತಿ ಪಡೆಯು ವಂತಾಯಿತು.

*ಹುಟ್ಟಿ ಬಂದನು ಬಸವ ಕಟ್ಟುದಕೆ ಕಲ್ಯಾಣ*
*ಬಿಟ್ಟು ಬಾಗೋಡಿ ನಾಗಾಯಿ – ಯೊಡಗೂಡಿ*
*ಮೆಟ್ಟು ಮಾಡಿದನು ಸಂಗಮಕೆ.*

ಬಸವನ ಬಾಗೇವಾಡಿಯಿಂದ ಬಸವಣ್ಣ ಅಕ್ಕನಾಗಮ್ಮನ ಜೊತೆ ಅಜ್ಜಿಯ ಊರು ಸಂಗಮಕ್ಕೆ ಬಂದು ಶಾಲೆಯಲ್ಲಿ ಕಲಿತು ಸಕಲ ವಿದ್ಯಾಪಾರಂಗತನಾಗಿ ವೇದಗಳೆಲ್ಲ ಹುಸಿಯೆಂದು ಬ್ರಾಹ್ಮಣರೊಂದಿಗೆ ವಾದ ಮಾಡಿ, ವಾದದಲ್ಲಿ ಗೆದ್ದು ಪ್ರಸಿದ್ಧನಾದ ವಿಚಾರವನ್ನು ತಿಳಿದ ದೊರೆ ಬಿಜ್ಜಳ ಬಸವಣ್ಣನನ್ನು ಕರೆತರುವಂತೆ ಅವರ ಸೋದರ ಮಾವ ಬಲದೇವನನ್ನು ಕಳುಹಿಸುವ ಸನ್ನಿವೇಶವನ್ನು–

*ಬಿಜ್ಜಳನು ಕೇಳಿದನು ದರ್ಜೆ ಬಸವನ ಹೆಸರ*
*ಅಜ್ಜಯ್ಯನೂರು ಸಂಗಮಕೆ – ಕರೆತರಲು*
*ಮರ್ಜೆಯಲಿ ಬಂದ ಬಲದೇವ.*

ಬಸವಣ್ಣನವರಲ್ಲಿದ್ದ ಅಗಾಧವಾದ ಪಾಂಡಿತ್ಯ, ತರ್ಕ ಮಾಡುವ ಶಕ್ತಿ, ಸಮಾಜದ ಕೆಳಸ್ತರದ ಬಗ್ಗೆ ಇದ್ದ ಕಾಳಜಿ, ಕಳಕಳಿ, ಕಾಯಕ–ದಾಸೋಹಕ್ಕೆ ಕೊಟ್ಟ ಮಹತ್ವ ಇವೆಲ್ಲ ಸದ್ಗುಣಗಳಿಂದ ಪ್ರಭಾವಿತನಾದ ಬಲದೇವ ತನ್ನ ಮಗಳನ್ನು ಧಾರೆ ಎರೆದುಕೊಟ್ಟ.

*ಮೆಚ್ಚಿದನು ಬಲದೇವ ಇಚ್ಛೆಯಲಿ ಮಗಳಿತ್ತ*
*ಕೆಚ್ಚೆದೆಯ ವೀರ ಬಸವನಿಗೆ – ಕಲ್ಯಾಣ*
*ನೆಚ್ಚಿ ಸಲಹೆಂದು ಕೈ ಮುಗಿದು.*

ದೊರೆ ಬಿಜ್ಜಳ ಬಸವಣ್ಣನವರಲ್ಲಿದ್ದ ಹೃದಯವಂತಿಕೆ, ವಿನಯವಂತಿಕೆ, ಮಾಡುವ ಕೆಲಸದಲ್ಲಿ ಪ್ರಾಮಾಣಿಕತೆ, ಶ್ರದ್ಧೆ, ಸಂದರ್ಭೋಚಿತವಾದ ಸೂಕ್ತ ನಿರ್ಧಾರ ಇವುಗಳಿಂದ ಪ್ರಭಾವಿತನಾಗಿ, ರಾಜಮುದ್ರಿಕೆಯನ್ನು ಕೊಡುವುದರ ಮೂಲಕ ಮಂತ್ರಿಪದವಿಯನ್ನು ನೀಡಿ ಗೌರವಿಸುತ್ತಾನೆ. ಈ ಸಂದರ್ಭವನ್ನು ಜನಪದರು ಅತ್ಯಂತ ಸರಳವಾಗಿ ತ್ರಿಪದಿಯ ಮೂಲಕ ಅಭಿವ್ಯಕ್ತಿಗೊಳಿಸಿರುವುದನ್ನು ಕಾಣಬಹುದು.

*ಅರಸ ಬಿಜ್ಜಳರಾಯ ಮರೆತಂದು ಕುಲಮತವ*
*ಕರೆಸಿ ಬಸವನಿಗೆ ಒಪ್ಪಿಸಿದ – ಮಂತ್ರಿ ಪದ*
*ಹರುಷದಲಿ ರಾಜ ಮುದ್ರಿಕೆಯ.*

ಮಂತ್ರಿಪದವಿಯನ್ನು ಸ್ವೀಕರಿಸಿದ ಬಸವಣ್ಣನವರು ರಾಜ್ಯದ ಹಿತವನ್ನು ಕಾಪಾಡುವುದರ ಜೊತೆಗೆ ರಾಜ ಬೊಕ್ಕಸ ತುಂಬಲು ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ರೂಪಿಸಿ ದಕ್ಷಮಂತ್ರಿಯೆಂಬ ಹೆಗ್ಗಳಿಕೆಗೆ ಪಾತ್ರರಾದರು. ರಾಜಕಾರ್ಯದ ಜೊತೆಗೆ ಜನರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಲು ಅನುಭವ ಮಂಟಪವನ್ನು ಕಟ್ಟಿ ತನ್ಮೂಲಕ ಸಮಾನ ಮನಸ್ಕರನ್ನು ಜಾತಿ–ವರ್ಗ ಭೇದವಿಲ್ಲದೆ ಒಂದುಗೂಡಿಸಿ ಮುಕ್ತ ಚರ್ಚೆ ನಡೆಸುವುದರ ಮೂಲಕ ಒಳ್ಳೆಯ ಸಮಾಜವನ್ನು ಕಟ್ಟುವ ಮಹಾಣಿಹದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

* ೧೬೧೭, ಮಾತೃಶ್ರೀ, ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ಆನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯ ರಸ್ತೆ, ಬೆಂಗಳೂರು–೯೧

*ಸಾಗಿ ಬಸವನು ಬಂದು ತೂಗಿದನು ಕಲ್ಯಾಣ*
*ಹಾಗಿನಲಿ ಕಟ್ಟಿ ಅನುಭಾವ – ಮಂಟಪದ*
*ಕೂಗು ಕೇಳುತಲಿ ಜನವೆದ್ದು.*

*ಕೂಡಿದರು ಹುರುಪಿನಲಿ ನಾಡ ಬಲ್ಲಿದವರೆಲ್ಲ*
*ಸೂಡ ಕಟ್ಟಿದರು ಶಿವ ನುಡಿಯ – ಕಾಯಕದ*
*ಗೂಡಾತು ಲೋಕಜನ ಹಿಗ್ಗಿ.*

ಪ್ರತಿಯೊಬ್ಬರು ಕಷ್ಟಪಟ್ಟು ಸತ್ಯಶುದ್ಧ ಕಾಯಕ ಮಾಡಿ ಗಳಿಸಬೇಕು. ಅಂದಂದು ಗಳಿಸಿದ್ದನ್ನು ಅಂದೇ ವಿನಿಯೋಗಿಸಬೇಕು. ತಮಗೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದದ್ದನ್ನು ದಾಸೋಹ ರೂಪದಲ್ಲಿ ವಿನಿಯೋಗಿಸಬೇಕು. ಹಾಗೆ ವಿನಿಯೋಗಿಸಿದಾಗ ಕಾಯಕ ಮತ್ತು ದಾಸೋಹ ಎರಡಕ್ಕೂ ಅರ್ಥ ಬರುತ್ತದೆ, ಬೆಲೆ ಬರುತ್ತದೆ ಎಂಬ ತತ್ವವನ್ನು ನಮ್ಮ ಜನಪದರು ಅರ್ಥಮಾಡಿಕೊಂಡ ಬಗೆ ಹೀಗೆ:

*ಅರ್ಪಣೆಯ ಅನುಭಾವ ಹೆಪ್ಪುಗಟ್ಟಿತು ಲೋಕ*
*ಬೆಪ್ಪಾತು ನಾಕ ಕಾಯಕದ – ಹಾಲ್ಗೊಳೆಯ*
*ತೆಪ್ಪ ದಾಸೋಹ ತೇಲುತಲಿ.*

*ಉಂಡು ತೇಗಿತು ಲೋಕ ಕೊಂಡಾಡಿ ಕಾಯಕವ*
*ಕಂಡ ಕಂಡಲ್ಲಿ ದಾಸೋಹ – ಕಾಯಕದ*
*ಕಂಡ ಜೀವನದ ಶಿವ ಮಾತು.*

ಎಷ್ಟು ಸೊಗಸಾಗಿ ಬಣ್ಣಿಸಿದ್ದಾರೆ. ಬಸವಾದಿ ಶರಣರು ಮಾಡುವ ಕಾಯಕವನ್ನು ಕಂಡು ಇಡೀ ನಾಡೇ ಆಶ್ಚರ್ಯದಿಂದ ನೋಡಿತು. ಅಷ್ಟೇ ಅಲ್ಲ ಹಾಲಿನ ಹೊಳೆಯಲಿ ದಾಸೋಹದ ತೆಪ್ಪ ತೇಲಿತು ಎನ್ನುವಾಗ ಜನಪದರ ಪ್ರತಿಭೆ ಅರಳಿರುವುದನ್ನು ಗಮನಿಸಬಹುದು.

ಸಮಾಜದಲ್ಲಿ ಕಿಡಿಗೇಡಿಗಳೂ ಇರುತ್ತಾರೆ. ಇಂತಹವರು ಎಲ್ಲಾ ಕಾಲದಲ್ಲಿಯೂ ಕಂಡು ಬರುತ್ತಾರೆ. ಇದಕ್ಕೆ ೧೨ನೇ ಶತಮಾನದಲ್ಲಿದ್ದ ಸಮಾಜವೂ ಹೊರತಲ್ಲ. ಬಸವಣ್ಣನವರು ಮಾಡುವ ಒಳ್ಳೆಯ ಕೆಲಸವನ್ನು ನೋಡಿ ಸಹಿಸಲಾಗದ ಕೆಲವರು ಬಸವಾದಿ ಶರಣರ ಬಗ್ಗೆ ಇಲ್ಲಸಲ್ಲದ ಆರೋಪದ ಮಳೆಗರೆಯುತ್ತಾರೆ. ಒಂದು ರೀತಿಯಲ್ಲಿ ಒಂದು ಕೊಳಗ ಹಾಲಿಗೆ ಹುಳಿಯನ್ನು ಹಿಂಡುವ, ಹರುಳುಪ್ಪನ್ನು ಸುರಿಯುವ ಕೆಲಸ ಮಾಡಿ ವಿಕೃತವಾದ ಸಂತೋಷದ ನಗೆಯನ್ನು ಸೂಸುತ್ತಾರೆ. ಈ ಸಂದರ್ಭವನ್ನು ನಮ್ಮ ಜನಪದರು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾರೆ.

*ಹಾರೂರ ಹರಿದಾಟಿ ಮಾರಿ ಮಾರಿಗೆ ಮಸಿಯು*
*ಊರೂರು ಕಾರಿ ಕಿಡಿಮಾತ – ನಾಡೆಲ್ಲ*
*ಹಾರುವಗೆ ಹೊರತು ಹದನಾಡು.*

*ಎರಕ ಹೊಯ್ದಿತು ಲೋಕ ಸರಸ ಕಾಯಕ ನುಡಿಯ*
*ಹರಕ ಹಾರವಗೆ ಕಿರಿ ಮನಸು – ಉಣ್ಣುದಕೆ*
*ಹರಳುಪ್ಪ ಒಗೆದ ಹಾಲ್ಗೊಳೆಗೆ.*

ಬಸವಣ್ಣನವರ ಕೀರ್ತಿ ದಶದಿಕ್ಕುಗಳಿಗೂ ಹರಡಿ ಎಲ್ಲರ ಗಮನ ಕಲ್ಯಾಣದತ್ತ ನೋಡುವಂತಾಗುತ್ತದೆ. ಅನುಭಾವದ ಮೇರುಶಿಖರ ಅಲ್ಲಮಪ್ರಭುವಿಗೂ ಮುಟ್ಟಿ ಬಸವಣ್ಣನವರನ್ನು ಕಾಣಲು ಬನವಾಸಿಯಿಂದ ಬರುವ ಪ್ರಸಂಗವನ್ನು ಜನಪದರು ತಮ್ಮದೇ ಆದ ರೀತಿಯಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ.

*ಬನವಾಸಿ ಕುಂತಳಕೆ ಮನೆಮಾತು ಅಲ್ಲಮನು*
*ಮನವೊಪ್ಪಿ ಲೋಕ ಕೈ ಮುಗಿದು – ಕೇಳುತಲಿ*
*ಜನಕೆ ಊದಿದನು ಶಿವಮಂತ್ರ.*

*ಲಕ್ಕುಂಡಿ ಹೊಲ ಬೆಳೆದು ಮುಕ್ತಾಯಿ ಅಜಗಣ್ಣ*
*ಮಿಕ್ಕ ಶರಣರಿಗೆ ಶಿವಮಾತು – ಪ್ರಭುದೇವ*
*ಹೊಕ್ಕ ಹೊಕ್ಕಲ್ಲಿ ಹೊನ್ನುಗ್ಗಿ.*

ಬಸವಣ್ಣನವರ ಮಾನವೀಯ ಮೌಲ್ಯಗಳ ಪ್ರಭಾವಕ್ಕೊಳಗಾಗಿ ನಾಡಿನಲ್ಲದೆ ದೇಶದ ಮೂಲೆಮೂಲೆಯಿಂದ ಶರಣರು ಕಲ್ಯಾಣದತ್ತ ಧಾವಿಸಿ ಬರುವ ವಿವರಗಳನ್ನು ಜನಪದರು ತ್ರಿಪದಿಗಳ ಮೂಲಕ ಸರಳವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ. ಕರ್ಮಯೋಗಿ ಸಿದ್ಧರಾಮ ಸೊನ್ನಲಿಗೆಯಿಂದ ಆಗಮಿಸುತ್ತಾನೆ.

*ಹಾದಿ ಹಾದಿಗೆ ಗುಡಿಯ ಬೀದಿ ಬೀದಿಗೆ ಕೆರೆಯ*
*ಸಾಧಿಸಿದ ಕಟ್ಟಿ ಸಿದ್ಧರಾಮ – ಸೊನ್ನಲಿಗೆ*
*ಸಾಧು ಸಿದ್ಧನಿಗೆ ಮನೆಮಾತು.*

ಜನಪದರು ಕಂಡಂತೆ ಸಿದ್ಧರಾಮನಿಗೆ ತಾನೊಬ್ಬ ಶ್ರೇಷ್ಠ ಸಿದ್ಧಪುರುಷ ಎಂಬ ಅಹಂನ ಎಳೆಯಿತ್ತು, ಆ ಅಹಂ ಬಹಳ ಕಾಲ ಉಳಿಯಲಿಲ್ಲ. ಪ್ರಭುದೇವರ ದರ್ಶನದಿಂದ, ಅವರ ಅನುಭಾವದ ಮಾತಿನಿಂದ ಶಿವಮತಕ್ಕೆ ಸಿದ್ಧರಾಮ ಶರಣಾಗುವ ಬಗೆಯನ್ನು ಹೇಳಿದ್ದಾರೆ.

*ಸಿದ್ಧ ಪುರುಷನು ಎಂದು ಸಿದ್ಧರಾಮಗೆ ಬಿಮ್ಮು*
*ಉದ್ದಂಡನಾಗಿ ಆಳಿದನು – ಪ್ರಭುದೇವ*
*ಹೆದ್ದಾರಿ ಬಂದ ಶಿವ ಬೆಳಕು.*

*ಸಿದ್ಧರಾಮನ ಬಿಮ್ಮು ಬಿದ್ದು ಹೋಯಿತು ಕರಗಿ*
*ಬುದ್ಧ ಪ್ರಭುದೇವ ತಿಳಿಹೇಳಿ – ಸೊನ್ನಲಗಿ*
*ಸಿದ್ಧ ಶರಣಾದ ಶಿವಮತಕೆ.*

ಪ್ರಭುದೇವರನ್ನು ಬುದ್ಧನಿಗೆ ಹೋಲಿಸಿರುವುದು ಜನಪದರ ಪ್ರತಿಭಾ ಶ್ರೀಮಂತಿಕೆಯ ದ್ಯೋತಕವಾಗಿದೆ. ಬುದ್ಧನ





ಚಿಂತನೆಯ ಬಗ್ಗೆ, ಆಧ್ಯಾತ್ಮಿಕದ ಬಗ್ಗೆ ಜನಪದರಿಗೆ ಅರಿವಿರುವುದು ಇದರಿಂದ ವ್ಯಕ್ತವಾಗುತ್ತದೆ.

ಪ್ರಭುದೇವರು, ಸಿದ್ಧರಾಮ ಬಸವಕಲ್ಯಾಣಕ್ಕೆ ಬಂದ ಮೇಲೆ ಕಲ್ಯಾಣಕ್ಕೆ ಒಂದು ಹೊಸ ಕಳೆ ಬಂದಿತು. ಬಸವಣ್ಣನವರ ವ್ಯಕ್ತಿತ್ವಕ್ಕೆ ಮಾರುಹೋಗದವರಾರು? ಅಂಥ ಘನ ಮಹಿಮರು ಬಸವಣ್ಣನವರು.

*ಅಲ್ಲಮನು ಸಿದ್ಧರಾಮ ಬಲ್ಲಿದಲ್ಲರು ಬರಲು*
*ಕಲ್ಯಾಣ ಮನೆಗೆ ಕಳೆ ಬಂತು – ಬಸವಯ್ಯ*
*ಎಲ್ಲಿ ಹೋದಲ್ಲಿ ಬೆಲ್ಲಾದ.*

ಮುಕ್ತ ಚರ್ಚೆಗೆ, ವಿಚಾರ ಚಿಂತನೆಗೆ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪಕೆ ಅಲ್ಲಮಪ್ರಭುವನ್ನು ಅಧ್ಯಕ್ಷರನ್ನಾಗಿ ಮಾಡಿದರು. ಈ ಅನುಭವ ಮಂಟಪ ಅತ್ಯಪೂರ್ವವಾಗಿತ್ತು. ಶರಣರಾದ ಹಿಪ್ಪರಗಿ ಮಾಚಯ್ಯ, ಉಪ್ಪಗಿರಿ ಸಂಗಯ್ಯ, ಹರಳಯ್ಯ, ಕಿನ್ನರಿ ಬೊಮ್ಮಯ್ಯ, ಮಡಿವಾಳ ಮಾಚಯ್ಯ ಮೊದಲಾದ ಶರಣರು ಅನುಭವ ಮಂಟಪದಲ್ಲಿ ಭಾಗವಹಿಸಿ ತಮ್ಮ ಭಾವನೆಗಳನ್ನು, ವಿಚಾರಗಳನ್ನು ಮುಕ್ತವಾಗಿ ಚರ್ಚೆ ಮಾಡುತ್ತಿದ್ದರು. ತಪ್ಪಿದ್ದನ್ನು ಒಪ್ಪಿಕೊಂಡು ಸರಿಕಂಡದ್ದನ್ನು ಸ್ವಾಗತಿಸುತ್ತಿದ್ದರು.

*ಹಿಪ್ಪರಗಿ ಮಾಚಯ್ಯ ಉಪ್ಪಗಿರಿ ಸಂಗಯ್ಯ*
*ಅಪ್ಪ ಹರಳಯ್ಯ ಮಂಟಪಕೆ – ಲೋಕೆಲ್ಲ*
*ಬೆಪ್ಪಾಗಿ ಕೂತು ಕಿವಿಗೊಟ್ಟು.*

*ಕಿನ್ನರಿಯ ಬೊಮ್ಮಯ್ಯ ಕಿನ್ನರಿಯ ಬಾರಿಸಲು*
*ಕುನ್ನಿ ಹಸು ಮರೆತು ಕಿವಿಗೊಟ್ಟು – ಕಲ್ಯಾಣ*
*ಚೆನ್ನಾತು ಲೋಕ ಚೆಲುವಾತು.*

*ಅಲ್ಲಮನೆ ಗುರುವಾದ ಕಲ್ಯಾಣ ಮಂಟಪಕೆ*
*ಕಲ್ಲೆದೆಯ ಬಂಟ ಮಡಿವಾಳ – ಕರುಣಾಳು*
*ಸಲ್ಲಿಸಲು ಸೇವೆ ಮಂಟಪಕೆ.*

ಬಸವಾದಿ ಶರಣರು ಸಮಾಜ ಪರಿವರ್ತನೆಯ ಹಾದಿಯಲ್ಲಿ ಮುನ್ನಡೆಯುತ್ತಿರುವುದನ್ನು ಕಂಡು ಕೆಲವರು ಸಹಿಸಲಾರದೆ ರಾಜನಿಗೂ ಬಸವಣ್ಣನವರ ನಡುವೆ ಮನಸ್ತಾಪ ಉಂಟಾಗುವಂತೆ ಮಾಡಲು ಸಂದರ್ಭಕ್ಕಾಗಿ ಕಾಯುತ್ತಿದ್ದರು. ತಪ್ಪುಗಳು ಸಿಗದೆ ಇರುವುದರಿಂದ ಹತಾಶರಾಗಿದ್ದರು. ದೊರೆಗೆ ದೂರು ನೀಡುವ ಸಂದರ್ಭ ಒದಗಿಬಂತು. ಬ್ರಾಹ್ಮಣ ಮಧುವರಸನ ಮಗಳನ್ನು ಹರಳಯ್ಯನ ಮಗನಿಗೆ ವಿವಾಹ ಮಾಡಿಕೊಟ್ಟಿದ್ದನ್ನು ದೊರೆಗೆ ಚಾಡಿ ಹೇಳಿ ಅವನ ಮನಸ್ಸನ್ನು ಕೆಡಿಸಿದುದಲ್ಲದೆ ಜೈನರಿಗೆ ಕಿವಿ ಚುಚ್ಚಿದರು. ಹಾರುವರ ಮಾತನ್ನು ಕೇಳಿ ಜೈನರು ಶರಣರ ವಿರುದ್ಧ ಮಸಲತ್ತು ಮಾಡಿದರು. ಜೈನರೆಲ್ಲ ಒಂದುಗೂಡಿ ಬಿಜ್ಜಳನಿಗೆ, ಸಮಾಜಘಾತುಕ ಮಾಡಿದವರಿಗೆ ಶಿಕ್ಷೆ ನೀಡಬೇಕೆಂದು ದೂರು ನೀಡಿ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬೇಕೆಂದು ಆಗ್ರಹಪಡಿಸಿದರು. ಸ್ವಜಾತಿಯವರ ಮಾತನ್ನು ಕೇಳಿದ ಬಿಜ್ಜಳ ಹೆಂಡವನ್ನು ಕುಡಿದ ಮಂಗನಂತಾದ. ಈ ಎಲ್ಲಾ ವಿದ್ಯಮಾನಗಳನ್ನು ಜನಪದರು ತಮ್ಮದೇ ಆದ ರೀತಿಯಲ್ಲಿ ಹಂತಿಪದಗಳ ಮೂಲಕ ಸರಳವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ.

*ಹಾರುವರ ಮಧುವರಸ ಊರ ಮಾತನು ಮೀರಿ*
*ಧಾರೆ ಎರೆದಿತ್ತು ಮಗಳನ್ನು – ಬೀಗಾದ*
*ಮಾರಹರ ಭಕ್ತ ಹರಳನಿಗೆ.*

*ಕೊಡಿಗಳು ಹಾರುವರು ಮಂಡಿಗೆಯ ಉಣ್ಣುದಕೆ*
*ಕಂಡ ಕಂಡಲ್ಲಿ ಕುದಿಮಾತ – ನಾಡಿದರು*
*ಹೆಂಡ ಕುಡಿದಂತೆ ಜೈನರಿಗೆ.*

*ಜೊಂಡ ಜೈನರ ಮಾತ ಹುಂಡ ಬಿಜ್ಜಳ ಕೇಳಿ*
*ಕೊಂಡನರಮನೆಗೆ ಶಿವಸುರಿಯ – ಬೇಡೆಂದು*
*ದಂಡೇಶ ಬಸವ ತಿಳಿಹೇಳಿ.*

ಬಸವಣ್ಣನವರು ಅವರಿಬ್ಬರ ವಿವಾಹ ಶರಣರೆಲ್ಲರ ಸಮ್ಮುಖದಲ್ಲಿ ಒಪ್ಪಿ ಆದುದು. ಇವರಿಬ್ಬರು ಶರಣತತ್ವ ಸಿದ್ಧಾಂತವನ್ನು ಒಪ್ಪಿಕೊಂಡವರು. ನೀವು ತಿಳಿದಂತೆ ಇಲ್ಲಿ ಯಾವ ಅಪರಾಧವೂ ನಡೆದಿಲ್ಲ ಎಂದು ಬಿಜ್ಜಳನಿಗೆ ಮನವರಿಕೆಯಾಗುವಂತೆ ಹೇಳಿದರೂ, ವಿಚಾರಶಕ್ತಿಯನ್ನು ಕಳೆದುಕೊಂಡಿದ್ದ ಅವನು ಬಸವಣ್ಣನವರ ಮಾತನ್ನು ಕೇಳಲಿಲ್ಲ. ನವದಂಪತಿಗಳಿಗೆ ವಿಷಕೊಟ್ಟು ಕೊಲ್ಲಿಸಿದ. ಇದರಿಂದ ಕಲ್ಯಾಣದಲ್ಲಿ ಅಶಾಂತಿಯ ಬಿರುಗಾಳಿ ಬೀಸಿ ರಕ್ತಪಾತವಾದುದನ್ನು ಕಂಡ ಬಸವಣ್ಣನವರು ದಿಗ್ಭ್ರಾಂತರಾಗುತ್ತಾರೆ.

*ಗದ್ದಲಕೆ ಕಲ್ಯಾಣ ಸದ್ದೆದ್ದು ಒಳ್ಳೆಂದು*
*ಎದ್ದು ಓಡಾಡಿ ಜನಬಿದ್ದು – ಹೌಹಾರಿ*
*ದದ್ದರಿಸಿ ಲೋಕ ಗಜಬಿಜಗೆ.*

*ಅರಸ ಬಿಜ್ಜಳರಾಯ ಮರೆತು ಬಸವನ ಮಾತ*
*ಕರೆಸಿ ಶರಣರಿಗೆ ವಿಷ ಬಿಟ್ಟ – ಬಸವಯ್ಯ*
*ಹೊರಹೊರಟ ಹೇಸಿ ಮನ ನೊಂದ.*

'ಹೇಸಿ ಮನ ನೊಂದ' ಎಂಬ ಮಾತು ಬಸವಕಲ್ಯಾಣದಲ್ಲಿ ಉಂಟಾದ ಅಹಿತಕರ ವಿದ್ಯಮಾನಗಳಿಗೆ ತುಂಬಾ ಬೇಸರಪಟ್ಟು ಕಿಡಿಗೇಡಿಗಳ ಮಧ್ಯೆ ಬಾಳುವುದು ಕಷ್ಟ ಎಂದು ಮನನೊಂದು ಕಲ್ಯಾಣವನ್ನು ಬಿಡಲು ನಿಶ್ಚಯಿಸುತ್ತಾರೆ. ಹೋಗುವ ಮುನ್ನ ಚೆನ್ನಬಸವಣ್ಣನಿಗೆ ಶರಣ ಸಮುದಾಯ

ವನ್ನು ರಕ್ಷಿಸುವ ಹೊಣೆಯನ್ನು ವಹಿಸುವ ಸನ್ನಿವೇಶವನ್ನು ಜನಪದರು ಮನಮುಟ್ಟುವಂತೆ ಬಣ್ಣಿಸಿದ್ದಾರೆ.

*ಶಿವಯೋಗಿ ಮಗ ಬಾರೊ ಶಿವಪುತ್ರ ಚನ್ನಬಸವ*
*ಶಿವನಾಣೆ ಚೆನ್ನಬಸವಣ್ಣ – ಕಲ್ಯಾಣ*
*ಶಿವಗಳಿಸ ಬಾರೊ ಮಂಟಪಕೆ.*

*ಕರೆದು ಆಶೀರ್ವದಿಸಿ ಹರಿಸಿ ಒಪ್ಪಿಸಿ ಬಸವ*
*ವರ ಚೆನ್ನಬಸವ ಶರಣರಿಗೆ – ಕಂಟಕದ*
*ಹುರಿಯಾಳು ಕಾಯೊ ಹೊಸಮತವ.*

ಕಲ್ಯಾಣವನ್ನು ಬಸವಣ್ಣನವರು ಬಿಟ್ಟುಹೋಗುವ ಸನ್ನಿವೇಶವನ್ನು ಮನಮಿಡಿಯುವಂತೆ ಹೇಳಿದ್ದಾರೆ.

*ಹೇಳಿ ಹೊರಟನು ಬಸವ ಕೇಳಲಾರದೆ ಮಾತ*
*ಗೋಳಿಟ್ಟು ಜನವು ಸರಮಾಲೆ – ಸಂಗಮಕೆ*
*ಆಳು ಬಸವಯ್ಯ ದಯವಿಟ್ಟು.*

ಬಸವಣ್ಣನವರು ಕಲ್ಯಾಣ ಬಿಡುವ ನಿರ್ಧಾರವನ್ನು ಕೇಳಿ ಶರಣ ಸಮೂಹ, ಜನಸಾಮಾನ್ಯರು ದುಃಖಸಾಗರದಲ್ಲಿ ಮುಳುಗುತ್ತಾರೆ. ಶರಣರ ನೋವು ಬಸವಣ್ಣನವರ ದೃಢನಿರ್ಧಾರದ ಮುಂದೆ ಮಸುಕಾಗುತ್ತದೆ. ಬಸವಣ್ಣನವರ ದರ್ಶನ ಭಾಗ್ಯ, ಮಾರ್ಗದರ್ಶನ ಇನ್ನು ಮುಂದೆ ಸಿಗುವುದಿಲ್ಲ ಎಂಬುದನ್ನು ನೆನಪಿಸಿಕೊಳ್ಳಲು ಅವರಿಂದ ಸಾಧ್ಯವಾಗುವುದಿಲ್ಲ. ಆದರೆ ಸತ್ಯವನ್ನು ಒಪ್ಪಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿ ಅವರದಾಗುತ್ತದೆ. ಬಸವಣ್ಣನವರು ಕಲ್ಯಾಣವನ್ನು ತೊರೆದು ಸಂಗಮಕ್ಕೆ ಬಂದು ಸಂಗಮದಲ್ಲಿ ಬಯಲಾಗುತ್ತಾರೆ.

*ಹರಹರನೆ ವರಸಂಗ ಗುರು ಎನಗೆ ಪರಸಂಗ*
*ಕರುಣನಿಧಿ ಹರನೆ ಸಂಗಮನೆ – ಎಂದೆನುತ*
*ಕರಮುಗಿದ ಬಸವ ಬಯಲಾದ.*

ಜನಪದರು ಬಸವಣ್ಣನವರು ಸಮಾಜಕ್ಕೆ ನೀಡಿದ ಅಮೂಲ್ಯ ಕೊಡುಗೆಯನ್ನು; ಅವರು ಪ್ರತಿಯೊಬ್ಬರ ಹೃದಯದ ಮಂದಿರದಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿಸಿದ ಬಗೆಯನ್ನು ಮನದುಂಬಿ ಭಕ್ತಿಯಿಂದ ಸ್ಮರಿಸಿದ್ದಾರೆ.

*ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ*
*ಚೆಲ್ಲಿದರು ತಂದು ಶಿವಬೆಳಕ – ನಾಡೊಳಗೆ*
*ಸೊಲ್ಲೆತ್ತಿ ಜನವು ಹಾಡುವದು.*

*ಅರಿಯುದಕೆ ಕುರುಹೆಂದು ಕರಲಿಂಗ ನೀ ಕೊಟ್ಟೆ*
*ಶರಣೆಂಬ ನುಡಿಯ ಚಲಮಾಡಿ – ಶಿವಮತಕೆ*
*ಗುರು ಬಸವಲಿಂಗ ನಿಜ ಮಂತ್ರೊ.*

*ಬಸವ ಭಕ್ತಿಯ ಬೀಜ ಬಸವ ಮುಕ್ತಿಯ ತೇಜ*
*ಬಸವ ಕಾಯಕದ ಗುರುಬೀಜ – ಶಿವಮತಕೆ*
*ಬಸವ ಓಂಕಾರ ಶಿವನಾದೊ.*

ಬಸವಣ್ಣನವರು ನಮಗೆ ಕರಲಿಂಗವನ್ನು ನೀಡುವುದರ ಮೂಲಕ ಶಿವನನ್ನು ನೆನೆಯಲು, ಸಾಕ್ಷಾತ್ಕಾರ ಮಾಡಿಕೊಳ್ಳಲು, ಆಧ್ಯಾತ್ಮ ಜೀವನದತ್ತ ನಮ್ಮನ್ನು ತೊಡಗಿಸಿಕೊಳ್ಳಲು ಕರುಣಿಸಿದ ಎಂಬುದನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಅಷ್ಟೇ ಅಲ್ಲ; ಶಿವನನ್ನು ನೆನೆದರೆ ವಿಷವೂ ಅಮೃತವಾಗುತ್ತದೆ. ಅಂತೆಯೇ ಬಸವಣ್ಣನವರನ್ನು ನೆನೆದರೆ ಕೈಲಾಸಕ್ಕೆ ಹೋಗುವ ಭಾಗ್ಯ ನಮ್ಮದಾಗುತ್ತದೆ ಎಂದು ಹೇಳಿದ್ದಾರೆ. ಹಂತಿಯ ಹಾಡುಗಳನ್ನು ನಿಲ್ಲಿಸುವಾಗ ಒಂದು ಮಾತನ್ನು ಹೇಳುತ್ತಾರೆ. ಅವರ ಈ ಮಾತು ವಿನಯವಂತಿಕೆ, ಸಜ್ಜನಿಕೆ, ಕೃತಜ್ಞತೆಯ ದ್ಯೋತಕ.

*ಹಂತಿಯ ಹಾಡಂದು ಪಂತ ಕಟ್ಟಲು ಬೇಡ*
*ಕಂತಿ ಕರಗುವುದು ನಿಂತಲ್ಲಿ – ಬಸವಯ್ಯ*
*ಕುಂತು ಎದೆಯೊಳಗೆ ಹಾಡಿಸಿದ.*

ತಾವು ನೆಪಮಾತ್ರ, ನಮ್ಮ ಆಗುಹೋಗುಗಳಿಗೆಲ್ಲ ಬಸವಣ್ಣನೇ ಕಾರಣ ಎನ್ನುವ ಧನ್ಯತಾ ಭಾವನೆ ಅವರಲ್ಲಿ ಮುಪ್ಪುರಿಗೊಂಡಿದೆ.

ಡಾ. ಬಿ.ಎಸ್. ಗದ್ದಗಿಮಠ ಅವರು ಸಂಪಾದಿಸಿರುವ 'ಕನ್ನಡ ಜಾನಪದ ಗೀತೆ'ಗಳು ಕೃತಿಯಲ್ಲಿ ಸಂಗ್ರಹವಾಗಿರುವ ೫೫ ತ್ರಿಪದಿಗಳಲ್ಲಿ ಬಸವಣ್ಣನವರ ಜನನ, ಸಂಗಮದಲ್ಲಿ ಶಿಕ್ಷಣ ಪಡೆದಿದ್ದು, ಕಲ್ಯಾಣಕ್ಕೆ ಹೋದುದು, ಬಲದೇವನ ಮಗಳನ್ನು ವಿವಾಹವಾದುದು, ದೊರೆ ಬಿಜ್ಜಳ ಅವರ ಪ್ರತಿಭಾ ಶ್ರೀಮಂತಿಕೆಯನ್ನು ಮನಗಂಡು ಮಂತ್ರಿಯನ್ನಾಗಿ ಮಾಡಿದುದು, ಅಲ್ಲಮಪ್ರಭು–ಸಿದ್ಧರಾಮರು ಕಲ್ಯಾಣಕ್ಕೆ ಆಗಮಿಸಿದ್ದು, ಅನುಭವ ಮಂಟಪ ಸ್ಥಾಪಿಸಿ ಅಲ್ಲಮಪ್ರಭುವನ್ನು ಅಧ್ಯಕ್ಷರನ್ನಾಗಿ ಮಾಡಿದುದು, ಕಾಯಕ–ದಾಸೋಹ ತತ್ವವನ್ನು ರೂಪಿಸಿ ಅನುಷ್ಠಾನಗೊಳಿಸಿದುದು, ವರ್ಗಭೇದವಿಲ್ಲದೆ ಎಲ್ಲರೂ ಅನುಭವ ಮಂಟಪದಲ್ಲಿ ಚರ್ಚೆಯಲ್ಲಿ ಭಾಗವಹಿಸಿದುದು, ಮಧುವರಸನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟು ವಿವಾಹ ಮಾಡಿದುದು, ಹಾರುವರ ಚಾಡಿ ಮಾತನ್ನು ಕೇಳಿ ಬಿಜ್ಜಳ ನವದಂಪತಿಗಳಿಗೆ ವಿಷವಿಟ್ಟು ಸಾಯಿಸಿದುದು, ಈ ಅಹಿತಕರ ಬೆಳವಣಿಗೆಯಿಂದ ಮನನೊಂದು ಚೆನ್ನಬಸವಣ್ಣನಿಗೆ ಶರಣರ ನಾಯಕತ್ವವನ್ನು ವಹಿಸಿ ಕಲ್ಯಾಣವನ್ನು ಬಿಡಲು ತೀರ್ಮಾನಿಸಿದುದು, ಶರಣರ ದುಃಖಕ್ಕೂ ಸೋಲದೆ ಸಂಗಮಕೆ ಹೋಗಿ ಬಯಲಾದುದು. ಇವೆಲ್ಲ ವಿವರಗಳನ್ನು ಸರಳವಾಗಿ, ತಮ್ಮದೇ ಆದ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಬಸವಣ್ಣನವರನ್ನು ನಿತ್ಯಸ್ಮರಿಸುವುದರ ಮೂಲಕ ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಾರೆ. ○





# ಮಹಾನ್ ದಾರ್ಶನಿಕ ಬಸವಣ್ಣನವರು

– ಯೋಗೀಶ್ ನಿರ್ವಿಕಲ್ಪ *

*ಜಾಗ್ರ ಸುಷುಪ್ತಿಯಲ್ಲಿ ಮತ್ತೊಂದ ನೆನೆದಡೆ*
*ತಲೆದಂಡ, ತಲೆದಂಡ ಹುಸಿಯಾದಡೆ, ದೇವ,*
*ತಲೆದಂಡ, ತಲೆದಂಡ ।*
*ನೀವಲ್ಲದೆ ಅನ್ಯವ ನೆನೆದಡೆ ತಲೆದಂಡ, ತಲೆದಂಡ।*

**ಜಾ**ಗ್ರ ಸ್ವಪ್ನ ಸುಷುಪ್ತಿತ್ರಯಗಳ ಸಮಷ್ಠಿಯೇ ಈ ಜಗತ್ತು. ನಮ್ಮ ಅನುಭವ ಪ್ರಪಂಚದಲ್ಲಿ ಪರಮಾತ್ಮ ತತ್ತ್ವ ಅವ್ಯಕ್ತವಾಗಿ ಆವರಿಸಲ್ಪಟ್ಟಿದೆ. ನಮ್ಮ ಅಂತಃಕರಣಗಳು ಮಾಡುವ ಮೋಸ ದಿಂದ ಅದು ನಮಗೆ ಅರ್ಥವಾಗುತ್ತಿಲ್ಲ. ಅಂತಃಕರಣಗಳ ಸ್ಪಂದನದಿಂದ ಜೀವ–ಜಗತ್ತು–ಈಶ್ವರ ತತ್ವಗಳೆಲ್ಲವೂ ಬೇರೆ ಬೇರೆ ಕಾಣುತ್ತಿದೆ. ಅಂತಃಕರಣಗಳನ್ನು ದಾಟಿ ಒಳಗೆ ಪ್ರಶಾಂತವಾಗಿ ನೆಲೆ ನಿಂತಾಗ ಪರಮಾತ್ಮ ತತ್ತ್ವಭಾವದ ಅನುಭಾವ ಉಂಟಾಗುತ್ತದೆ. ಆ ಪರಮಾತ್ಮ ತತ್ತ್ವ ಕುರಿತು ನಾವು ಧ್ಯಾನಿಸಬೇಕು. ಅದುವೇ ಬದುಕಿನ ಸಾರ್ಥಕತೆಯ ಪರಮಗುರಿ ಎಂದು ಶುದ್ಧಾತ್ಮ ತತ್ತ್ವದ ಜ್ಞಾನ ಬೋಧೆಯನ್ನು ಲೋಕಕ್ಕೆ ಉಪದೇಶಿಸಿದವರು ಅಪರೋಕ್ಷ ಜ್ಞಾನಿಗಳಾದ ಗುರು ಬಸವಣ್ಣನವರು.

ನಾವು ನಾಲ್ಕು ಯುಗಗಳಿಂದಲೂ ಹೊರ ಪ್ರಪಂಚದಲ್ಲಿಯೇ ಶಾಶ್ವತವಾದ ಸುಖಶಾಂತಿಗಳನ್ನು ಹುಡುಕುವ ಪ್ರಯತ್ನ ಮಾಡುತ್ತಿದ್ದೇವೆ. ಇಂದಲ್ಲ ನಾಳೆ ನಮಗೆ ಸುಖ ಸಿಗುತ್ತದೆಂಬ ಅಜ್ಞಾನದಲ್ಲಿಯೇ ಬದುಕನ್ನು ಕಳೆಯುತ್ತಿದ್ದೇವೆ. ನಿಜಕ್ಕೂ ಅದು ಸಿಗುವುದಾದರೂ ಹೇಗೆ? ಎಂಬ ಪ್ರಶ್ನೆ ಗುರುಬಸವಣ್ಣನವರದು. ಅವರ ದೃಷ್ಟಿಯಲ್ಲಿ ಇದುವೇ ನಮ್ಮ ಮನಸ್ಸಿಗೆ ಅಂಟಿರುವ ಬಹು ದೊಡ್ಡ ಭವರೋಗವಾಗಿದೆ.

*ಭವರೋಗ ವೈದ್ಯನೆಂದು ನಾನಿನ್ನ ಮೊರೆ ಹೊಕ್ಕೆ*
*ಭಕ್ತದಾಯಕ ನೀ ಕರುಣಿಸು ಲಿಂಗತಂದೆ*
*ಜಯಜಯ ಶ್ರೀಮಹಾದೇವವೆನ್ನುತ್ತಿದ್ದಿತೆನ್ನ ಮನವು*
*ಶರಣೆಂದಿತೆನ್ನ ಮನವು.*

ನಮ್ಮ ಶರೀರ ಮತ್ತು ಮನಕ್ಕೆ ಅಂಟಿರುವ ಅಜ್ಞಾನವೆಂಬ ಭವರೋಗವನ್ನು ಗುಣಪಡಿಸುವ ವೈದ್ಯ ಪರಮಾತ್ಮ. ಪರಮಾತ್ಮನೊಬ್ಬನಿಂದ ಮಾತ್ರ ನಮ್ಮ ಭವರೋಗ ನಿವಾರಣೆಯಾಗಲು ಸಾಧ್ಯ. ಹಾಗೆಯೇ ನಮ್ಮ ಮನ ಬುದ್ಧಿಗಳಿಗೆ ಅಧಿಷ್ಠಾನವಾಗಿ ಬೆಳಗುತ್ತಿರುವ ನಿತ್ಯ ಶುದ್ಧಾತ್ಮ ತತ್ತ್ವವನ್ನು ಅನುಭಾವ ಪೂರ್ಣವಾಗಿ ಅನುಭಾವಿಸಿದಾಗ ಮಾತ್ರ ನಾವು ಶಾಶ್ವತವಾದ ಶಾಂತಿನೆಮ್ಮದಿಗಳನ್ನು ಕಾಣಲು ಸಾಧ್ಯ ಎಂದು ತಿಳಿಸಿದ ಬಸವಣ್ಣನವರು ಅದನ್ನು ಇಷ್ಟಲಿಂಗ ಯೋಗ ಸೂತ್ರದ ಮೂಲಕ ಕಂಡುಕೊಳ್ಳುವ ಮಾರ್ಗ ಸೂಚಿಯನ್ನು ನಮಗೆ ನೀಡಿದ್ದಾರೆ.

ನಾ ಎಂದರೆ ದೇಹ–ಮನ–ಬುದ್ಧಿಗಳಲ್ಲ ಎಂದು ತಿಳಿಸುವುದರ ಮೂಲಕ ನಮ್ಮ ನಿಜಸ್ವರೂಪದತ್ತ ಕರೆದೊಯ್ಯುವ ಇಷ್ಟಲಿಂಗ ಯೋಗವು ನಮ್ಮ ಮನದ ಆಂತರ್ಯದಲ್ಲಿರುವ ಪರಮಾತ್ಮ ತತ್ತ್ವದ ದರ್ಶನ ಮಾಡಿಸುತ್ತದೆ. ಯಾರಿಗೆ ಪರಮಾತ್ಮ ತತ್ತ್ವದ ಜ್ಞಾನದಲ್ಲಿ ಸಂಪೂರ್ಣ ನಂಬಿಕೆ, ಶ್ರದ್ಧೆ, ಇರುವುದಿಲ್ಲವೋ ಅವರು ಸದಾ ಸಂಸಾರ ಚಕ್ರದೊಳಗೆ ಬಂಧಿಯಾಗಿರುತ್ತಾರೆ. ಅದುವೇ ಭವರೋಗ ಅರ್ಥಾತ್ ಅಜ್ಞಾನವಾಗಿದೆ. ನಾವು ನಮ್ಮ ಮನದೊಳಗಿನ ಎಲ್ಲಾ ಕಶ್ಮಲಗಳನ್ನು ಹೊರಹಾಕಿದಾಗ ಮಾತ್ರ ನಮಗೆ ಶುದ್ಧಾತ್ಮ ಜ್ಞಾನ ಪ್ರಾಪ್ತಿಯಾಗುತ್ತದೆ. ಈ ಕಾರಣದಿಂದ ನಾವು ಮೊದಲು ನಮ್ಮ ಅಂತಃಕರಣಗಳನ್ನು ಶುಚಿಗೊಳಿಸುವ ಕಾರ್ಯ ಮಾಡಬೇಕು. 'ನಾನು ಅಜ್ಞಾನಿ, ನನಗೆ ನಿಜ ಜ್ಞಾನ ನೀಡಿ ಸಲಹು'! ಎಂದು ಭವರೋಗ ವೈದ್ಯನಾದ ಪರಮಾತ್ಮನಲ್ಲಿ ಅನನ್ಯ ಭಕ್ತಿ ಮತ್ತು ನಮ್ರತೆಯಿಂದ ಶರಣಾದರೆ ಜ್ಞಾನದ ಮಾರ್ಗ ನಮಗೆ ತಿಳಿಯುತ್ತದೆ.

ಜಗತ್ತಿನಲ್ಲಿ ಜ್ಞಾನಕ್ಕಿಂತ ಶ್ರೇಷ್ಠವಾದದ್ದು ಮತ್ತೊಂದಿಲ್ಲ. ಪರಮಾತ್ಮ ತತ್ತ್ವದ ನಿಜ ಅರಿವು ಪಡೆದ ಸಂತೃಪ್ತ ನಿಜ ಶರಣನೇ ನಿಜವಾದ 'ಶರಣ' ಎನಿಸಿಕೊಳ್ಳುತ್ತಾನೆ. ಜ್ಞಾನ ದರಿವಿನಿಂದ ಮಾತ್ರ ನಾವು ಸಂಸಾರ ಬಂಧನ ದಿಂದ ಪಾರಾಗಲು ಸಾಧ್ಯ ಎಂದು ಬಸವಣ್ಣನವರು ತಿಳಿಸಿದ್ದಾರೆ.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ–೫೭೭ ೨೦೨.

*ಜ್ಞಾನದಿಂದ ಆಚಾರ, ಜ್ಞಾನದಿಂದ ಅನುಭಾವ*
*ಜ್ಞಾನದಿಂದ ಪ್ರಸಾದವಲ್ಲದೆ,*
*ಜ್ಞಾನವನ್ನುಳಿದು ತೋರುವ ಘನವ ಕಾಣೆನು*
*ಎನ್ನ ಆಚಾರಕ್ಕೆ ನೀನು ಜ್ಞಾನರೂಪವಾದ ಕಾರಣ*
*ಸಂಗನ ಬಸವನೆಂಬ ಹೆಸರುವಡೆದೆನು !*

ಎಂದು ತಿಳಿಸಿದ ಅವರು ಜ್ಞಾನತತ್ತ್ವವೇ ಆದ ಪರಮಾತ್ಮನಿಂದ ನನ್ನ ಬದುಕು ಪಾವನಗೊಂಡಿತ್ತೆಂಬ ಅಭಿಪ್ರಾಯದ ಮೂಲಕ ಜ್ಞಾನದ ಮಹತ್ವವನ್ನು ಸ್ಮರಿಸಿಕೊಂಡಿರುವುದನ್ನು ನಾವಿಲ್ಲಿ ಕಾಣಬಹುದು. ಜೀವಭಾವವಿಲ್ಲದೇ ಶುದ್ಧಾತ್ಮ ತತ್ತ್ವ ಭಾವದಿಂದ ಬದುಕಿನಲ್ಲಿ ಸಾಗುವವನು ಸಹಜನು, ತಾನಿಲ್ಲದೇ ತಾ ನೀಡುವವನು ಸಹಜನು, ತಾ ಬೆರೆಸಿಹ ನಿಜಪದದೊಳು ಏನೊಂದರ ಹಮ್ಮಿಲ್ಲದೆ ಸಹಜ ಸುಜ್ಞಾನಿಯ ಮಾಟದ ಕೂಟದ ಸ್ಥಲದೊಳು ಪರಮಾತ್ಮ ತತ್ತ್ವ ಸಮರಸಗೊಂಡಿರುತ್ತದೆಂದು ಗುರು ಬಸವಣ್ಣನವರು ಜ್ಞಾನಿಯ ನಿಜಸ್ಥಿತಿಯ ನಿಲುವನ್ನು ಈ ಪರಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಎಲ್ಲೆಲ್ಲಿಯೂ ವ್ಯಾಪಕವಾಗಿರುವ ಗಾಳಿಯು ಹೇಗೆ ಆಕಾಶದಲ್ಲಿರುತ್ತದೆಯೋ ಹಾಗೆಯೇ ಸಮಸ್ತ ಜೀವರಾಶಿಗಳೆಲ್ಲವೂ ಪರಮಾತ್ಮ ತತ್ತ್ವದಲ್ಲಿಯೇ ಅಡಗಿದೆ. ಸರ್ವ ವ್ಯಾಪಕನಾದ ಪರಮಾತ್ಮ ತತ್ತ್ವದಲ್ಲಿ ಬದುಕನ್ನು ಸಮರಸಗೊಳಿಸಿಕೊಂಡವರು ಗುರುಬಸವಣ್ಣನವರು. ಅವರು ತಮ್ಮ ಬದುಕಿನ ಪ್ರತಿಯೊಂದು ಹೆಜ್ಜೆಯಲ್ಲಿಯೂ ಪರಮಾತ್ಮ ತತ್ತ್ವವನ್ನು ಅನುಭಾವಿಸಿದವರು. ಯಾವ ಮನೋಸ್ಪಂದನವಿಲ್ಲದ ಇಂದ್ರಿಯಾತೀತ (Transcendental) ಅಲೌಕಿಕ ಆನಂದದಲ್ಲಿಯೇ ವಿಹರಿಸಿದ್ದ ಅವರು ಬದುಕಿನ ಸಾರ್ಥಕತೆಯ ಯೋಗಸೂತ್ರವನ್ನು ಇಷ್ಟಲಿಂಗ ಯೋಗದ ಮೂಲಕ ಜಗತ್ತಿಗೆ ಅನುಗ್ರಹಿಸಿದ ಶ್ರೇಷ್ಠ ದಾರ್ಶನಿಕ ಎನಿಸಿಕೊಂಡಿದ್ದಾರೆ. ಅರ್ಥಪೂರ್ಣ ಸಮಾಜದ ನಿರ್ಮಾತೃರಾದ ಅವರು ಜಗತ್ತಿಗೆ ನೀಡಿದ ಸಂದೇಶಗಳು ಲೋಕಮಾನ್ಯ ಎನಿಸುವುದರ ಮೂಲಕ ವಿಶ್ವಶಾಂತಿಗೆ ಅವು ಮುನ್ನುಡಿ ಬರೆದಿವೆ.

ಲೋಕಕಲ್ಯಾಣ ಕಾರ್ಯ ನಿಮಿತ್ತ ಅವತರಿಸಿ ಬಂದ ಬಸವಣ್ಣನವರು ಇಹಲೋಕ ಪೂರೈಸಿ ತಮ್ಮ ಭೌತಿಕ ಶರೀರಕ್ಕೆ ಕ್ರಿಯಾವಿಶ್ರಾಂತಿ ನೀಡಿದ ದಿನ ಶ್ರಾವಣ ಶುದ್ಧ ಪಂಚಮಿಯಾಗಿದ್ದು ಆ ದಿನವನ್ನು ಗುರುಬಸವಣ್ಣನವರ ಲಿಂಗೈಕ್ಯ ಸಂಸ್ಮರಣಾ ದಿನವನ್ನಾಗಿ ದೇಶಾದ್ಯಂತ ಆಚರಿಸಿಕೊಂಡು ಬರಲಾಗುತ್ತಿದೆ. ಅವರು ಉಪದೇಶಿಸಿದ ಬದುಕಿನ ಸಾರ್ಥಕತೆಯ ಯೋಗಸೂತ್ರಗಳನ್ನು ನಾವು ಸ್ಮರಣೆ ಮಾಡಿಕೊಳ್ಳುವುದರ ಮೂಲಕ ಪರಮಾತ್ಮ ಚಿಂತನೆ ಯತ್ತ ನಮ್ಮ ಚಿತ್ತವನ್ನು ಹರಿಸುವುದು ಅತ್ಯಂತ ಅರ್ಥಪೂರ್ಣ ಎನಿಸುತ್ತದೆ.

○

## ಶ್ರೀವಾಣಿ

- ☐ ಜೀವನ ಒಂದು ಕ್ರಿಯಾಕ್ಷೇತ್ರ. ಇಲ್ಲಿ ಕರ್ಮಶೀಲ ರಾಗಿ ಬದುಕುವುದು ಮುಖ್ಯ. ದುಡಿಮೆಗೆ ಇಲ್ಲಿ ಪ್ರಾಮುಖ್ಯತೆ. ದುಡಿಮೆ ಸತ್ಯಶುದ್ಧವಾಗಿರಬೇಕು. ಕಾಯಕ ಬದ್ಧವಾಗಿ ಬದುಕುವುದು ಇಲ್ಲಿ ಸಲ್ಲುವ ಜೀವನ ವಿಧಾನ. ಕಾಯಕಜೀವಿ ಆಧ್ಯಾತ್ಮಜೀವಿಯೂ ಆಗಿರು ತ್ತಾನೆ. ಏಕೆಂದರೆ ಕಾಯಕ ಕೇವಲ ಸ್ವಾರ್ಥಕ್ಕಾಗಿ ದುಡಿಯುವ ಮಾರ್ಗವಲ್ಲ; ಲೋಕಹಿತಕ್ಕಾಗಿಯೂ ದುಡಿಯುವುದಾಗಿರುತ್ತದೆ.
- ☐ ದುಡಿದು ತಿನ್ನುವುದು ಪ್ರಸಾದವಾಗುತ್ತದೆ; ಅದು ಪದಾರ್ಥವೆನಿಸುವುದಿಲ್ಲ. ಮೈಗಳ್ಳತನದಿಂದ, ಸೋಮಾರಿಗಳಾಗಿ ಊಟ ಮಾಡುವುದು ಕೂಳಾಗುತ್ತದೆ; ಪ್ರಸಾದವಾಗುವುದಿಲ್ಲ. ಇಂದು ಪ್ರಸಾದ ಜೀವಿಗಳು ವಿರಳವಾಗುತ್ತಿದ್ದಾರೆ. ಕಾಯಕ ಮಾಡದೆ ತಿನ್ನುವುದು ಕೂಳು; ಶ್ರಮ ಜೀವನ ನಡೆಸಿ ಊಟಮಾಡುವುದು ಪ್ರಸಾದ.
- ☐ ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನು ಗಳಿಸಬೇಕು. ಧರ್ಮಕ್ಕೆ ವಿರುದ್ಧವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.





## ಪ್ರಭುದೇವ

– ಸಿಂಪಿ ಲಿಂಗಣ್ಣ *

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕವನ್ನು ಸಮಗ್ರ ಕ್ರಾಂತಿಗೆ ಈಡು ಮಾಡಿದ ಶಿವಶರಣರಲ್ಲಿ ಅಗ್ರಗಣ್ಯ ರೆನಿಸಿದ ಪ್ರಭುದೇವರಿಗೆ ಅಲ್ಲಯ್ಯ, ಅಲ್ಲಮಪ್ರಭು ಎಂದೂ ಅನ್ನುತ್ತಿದ್ದರು. ಅವರು ಆದಿಕವಿ ಪಂಪನ ಬನವಾಸಿ ನಾಡಿನವರು; ಅನಾದಿ ಶಿವಶರಣರೆನಿಸಿ ದವರು. ಆದಿಕವಿಗೆ ರಾಜಾಶ್ರಯ; ಅನಾದಿ ಕವಿಗೆ ಜನ ಜಂಗುಳಿಯೇ ಆಸರೆ. ಆ ಕವಿ ತನಗೆ ಆಶ್ರಯವಿತ್ತ ರಾಜನಲ್ಲಿ ಭವ್ಯಗುಣಗಳನ್ನು ಕಂಡು, ಮಹಾಕಾವ್ಯ ಬರೆದರೆ, ಈ ಶರಣ ತಾನಾಶ್ರಯ ಪಡೆದ ಜನಾಂಗದಲ್ಲಿ ದಿವ್ಯಗುಣಗಳನ್ನು ಪ್ರಕಟಪಡಿಸುವ ಮಹತ್ತಾದ ವಚನಗಳನ್ನು ಬರೆದನು. ಬನವಾಸಿ ನಾಡಿನ ನಿಸರ್ಗ ಸೌಂದರ್ಯವು ಪಂಪನಿಗೆ ಸತ್ಯ–ಶಿವಗಳನ್ನು ಒದಗಿಸಿದಂತೆ, ಪ್ರಭುವಿಗೆ ಆ ನಾಡಿನ ಅಂತಸ್ಥ ಶಿವವು ಸೌಂದರ್ಯ ಸತ್ಯಗಳನ್ನು ಅಳವಡಿಸಿಕೊಟ್ಟಿತು. ಪ್ರಭು ದೇವರು ನಾಗಾವಾಸದ ಅಧಿಪತಿಯ ಮಗನೆಂದೂ, ಹುಟ್ಟಾ ಮದ್ದಲೆಕಾರನೆಂದೂ ತಿಳಿಯುತ್ತದೆ. ಅವನಿಗೆ ಆಯತ ಪ್ರಸಂಗದಲ್ಲಿ ದೊರೆತ ಗುರು ಅನಿಮಿಷಯ್ಯ. 'ನಡೆ ನುಡಿಯಿಲ್ಲದೆ ಗುರು'ವಿನ ಉಪದೇಶ ಪ್ರಭುವಿಗೆ ಮೂಗಮೂಗರ ಪ್ರಸಂಗವಾಗಿ ಪರಿಣಮಿಸಿತು. ಹೊರಗೆ ಮುಗ್ಧವಾಗಿ ಕಂಡರೂ ಒಳಗೆ ಅರುಹಿನ ಪರಿಮಳ ಬೀರಿದರೆ ಸಾಕಲ್ಲವೇ? ಅದೇ ಅವರನ್ನು ಜ್ಞಾನಮೂರ್ತಿ, ವೈರಾಗ್ಯ ಮೂರ್ತಿ, ಅನುಭಾವಮೂರ್ತಿಯನ್ನಾಗಿ ಮಾರ್ಪಡಿಸಿತು. ಆ ಗೊರವನಿಗೆ ಅದೇ ತ್ರಿಶೂಲವಾಯಿತು.

ಅಲ್ಲಮನು ಅಲ್ಲೆನ್ನುವ ಸ್ವಭಾವದವನೇ ಅಲ್ಲ. ಅದೆಂಥ ಅಗಡು ವಿಚಾರವನ್ನು ತಂದು ಮುಂದಿಟ್ಟರೂ ಅದಕ್ಕೆ ಅಲ್ಲೆಂದವನಲ್ಲ. ಅದಕ್ಕಾಗಿಯೇ ಅವನಿಗೆ ಅಲ್ಲಮನೆಂಬ ಹೆಸರು ಬಂದಿತೇನೋ. ಅಲ್ಲೆನ್ನದೆ ಅಹುದೆಂದರೂ ಇದಿಷ್ಟೇ ಸತ್ಯವಲ್ಲ, ಸತ್ಯದ ಮಗ್ಗಲುಗಳು ಸಾಕಷ್ಟಿವೆಯೆಂಬುದು ತೋರಿಸಿ ಕೊಡುವನು. ಸೊನ್ನಲಿಗೆಯ ಸಿದ್ಧರಾಮನ ಕರ್ಮಸಾಧನವನ್ನು ಒಪ್ಪಿಕೊಂಡರೂ ಅಷ್ಟರಿಂದಲೇ ಪೂರ್ಣತೆ ಬರಲಾರದೆಂದು ಸ್ಪಷ್ಟವಾಗಿ ನುಡಿದು, ಅದಕ್ಕೆ ಬೇಕಾದ ಭಕ್ತಿ–ಜ್ಞಾನಗಳನ್ನು ಸಂಗಳಿಸುವ ಸಲಹೆ ಕೊಟ್ಟಿತು. ಆ ಬಳಿಕ ಕಲ್ಯಾಣ ಬಸವಣ್ಣನ ಭಕ್ತಿ ಭಂಡಾರಕ್ಕೆ ತಲೆದೂಗಿದರೂ ಅದಕ್ಕೆ ಜ್ಞಾನ ವೈರಾಗ್ಯಗಳ ಶ್ರೀಮಂತಿಕೆಯನ್ನು ಅನುಗೊಳಿಸುವ ಕ್ರಮವನ್ನು ಸೂಚಿಸಿದನು.

ಪ್ರಭುದೇವರನ್ನು ವೈರಾಗ್ಯಮೂರ್ತಿಯನ್ನಾಗಿ ಮಾಡಿದ್ದು ಅವರ 'ಒಲ್ಲೆನೆಂಬುದೇ ವೈರಾಗ್ಯ'. ಅದೇ ಜ್ಞಾನ ಬೀಜ. ಆ ಬೀಜಕ್ಕೆ ಇನ್ನೊಂದು ಪಕಳೆಯಿದೆ–'ಒಲಿದೆ ನೆಂಬುದೇ ಬಂಧನ', ಅದು ಬೇಕು. ಇದು ಬೇಡ, ಹಿಡಿ, ಇದ ಬಿಡು. ಅದೆಷ್ಟು ಸುಗಮ! ಅದೆಷ್ಟು ನೇರ!

ಭಯದಿಂದ ಭಕ್ತಿ ಅಂಕುರಿಸುವಂತೆ, ಅಗತ್ಯದ ಸಲುವಾಗಿ ಆಲ ಪಡೆಯುವುದೂ ಭಕ್ತಿಯ ಒಂದು ಮಾದರಿ. ಭಯ ನಿವಾರಣೆಯಾದಾಗ ಭಕ್ತಿ, ಅಗತ್ಯ ತಪ್ಪಿದಲ್ಲಿ ಆಲಪರೆಯುವಿಕೆ ಸದ್ದಿಲ್ಲದೆ ಅಡಗುವುವು. ಅಂಥವರ ಸಲು ವಾಗಿ ಪ್ರಭುದೇವರು, ದೇವರಿಗೆ ಹೇಳಿ ಎಚ್ಚರಿಕೆ ಕೊಡುವರು

*'ಏಡರು ಬಂದಡಸಲು ಮೃಡ ನಿಮ್ಮ ನೆನೆವರು*
*ಎಡರು ಕಡೆಗಾಗಲು ಮೃಡ, ನಿಮ್ಮ ನೆಡಹಿಯೂ ಕಾಣರು'*

ಎಡಹಿದ್ದು ತಪ್ಪಾಯಿತೆಂದು ಬಗೆಯದೆ, ಹಾದಿಯಲ್ಲಿಯೇ ಕುಳಿತುಕೊಳ್ಳಬೇಕೇ–ಎಂದು ಕೇಳುವ ಸಮಯ ಸಾಧಕರನ್ನು ಅವರು ಭಕ್ತರೆಂದು ಗ್ರಹಿಸಲಾರದು, ಅವರ ದಾರಿ ನೇರ ಗುರಿ, ಹತ್ತಿರ. ಅವರು ಹೇಳಿದರು–

*'ಮಣಿಯನೆಣಿಸಿ ದಿನವ ಕಳೆಯಲು ಬೇಡ,*
*ಕಣೆಯ ಪೂಜಿಸಿ ಕಾಲಕಳೆಯಲು ಬೇಡ*
*ಕ್ಷಣವಾದರೂ ಸಾಕು, ಕ್ಷಣದೊಳಗಿನ ಅರ್ಧವಾದರೂ ಸಾಕು.*
*ನಿಜದ ನೆನಹೇ ಬೇಕು'*

ಈ ದಾರಿಯೇ ಅವರಿಗೆ ಕರತಲಾಮಲಕವಾಗಿತ್ತು. ಅಂತೆಯೇ ಅವರು ಗಟ್ಟಿಸಿ ಕೇಳುತ್ತಿದ್ದರು–

*ನೆನೆ ನೆನೆ ಎಂದರೆ ಏನ ನೆನೆವೆನಯ್ಯ*
*ಕಾಯಕವೇ ಕೈಲಾಸವಾದ ಬಳಿಕ"*

ಯಾವುದನ್ನು ನೆನೆಯ ಬೇಕಾಗಿತ್ತೋ ಅದನ್ನು ನೆನೆನೆನೆದು ಅದೇ ಆಗಿ ಬಿಟ್ಟ ಬಳಿಕ ನೆನೆವುದೇನನ್ನು?– ಎನ್ನುವ ಶರಣ, ಐಕ್ಯಸ್ಥಲವನ್ನು ತಲುಪಿದರೂ, ಲೋಕಹಿತಕ್ಕಾಗಿ, ಜಗತ್ಕಲ್ಯಾಣಕ್ಕಾಗಿ ಐಕ್ಯಸ್ಥಲದಿಂದ ಹಿಂದಕ್ಕೆ ಸರಿದು, ಶರಣ ಸ್ಥಲದಲ್ಲಿ

* ಶ್ರೀ ಜಗದ್ಗುರು ಮೂರು ಸಾವಿರ ಮಠ, ಗ್ರಂಥಮಾಲೆ, ಹುಬ್ಬಳ್ಳಿ.

ನೆಲೆನಿಂದರು. ಅಂತೆಯೇ ಅನುಭಾವ ಮಂಟಪದಲ್ಲಿ ಅವರಿಗೆ ಅಗ್ರಪೀಠವು ಸಂಗಳಿಸಿತು. ಅದೇ ಶೂನ್ಯ ಸಿಂಹಾಸನ.

ಈ ಜಗತ್ತಿನಲ್ಲಿ ಪ್ರತಿಯೊಬ್ಬನೂ ಒಂದು ಬೀಜದ ಬೆಳೆಯೆಂದು ಪ್ರಭುದೇವರು ಹೇಳುತ್ತಾರೆ. 'ನೀನು ಭೂಮಿ, ನಾನು ಸಸಿ' ಎಂದು ಹೇಳಿ ಬಿಡದೆ, ಆ ಸಸಿಗೆ ಫಲವೆಂದರೆ ಗುಹೇಶ್ವರನೆಂದು ಹೇಳುತ್ತಾರೆ. ಪರಮಾತ್ಮ ಫಲ ಕೊಡುವ ಸಸಿಯಾದರೆ, ಬೀಜ ಯಾವುದಿರಬೇಕು? ಪರಮಾತ್ಮ ಬೀಜವೇ ಪರಮಾತ್ಮ ಫಲ ಕೊಡಬಲ್ಲದಲ್ಲವೇ? ಆಶೆಗಾಗಿಯೋ ಆಮಿಷಕ್ಕಾಗಿಯೇ ಸಾಯನಿಂತ ಸಸಿಯು, ನನ್ನ ಪರಂಪರೆಯನ್ನೇ ಮರೆತಂತಾಗುತ್ತದೆ. 'ನಿನಗಾಗಿ ಸತ್ತವರ' ಈ ಜಗತ್ತಿನ ಉದ್ದೇಶವನ್ನು ಈಡೇರಿಸುತ್ತಾರೆ; ಈಡೇರಿಸ ಬಲ್ಲರು. ಯಾರಿಗಾಗಿ ಹುಟ್ಟಿದೆವೋ ಅವರಿಗಾಗಿ ಸಾಯುವುದು ವಾಸ್ತವಿಕ. ಹುಟ್ಟುಸಾವುಗಳು ಯಾರಿಗೆ ಸೇರಬೇಕೆನ್ನುವುದು ನಿರ್ಧಾರವಾಗುವ ಮೊದಲು, 'ಯಾರಿಗಾಗಿ ಬದುಕಬೇಕು'-ವಿಚಾರಿಸಬೇಡವೇ? 'ನಿನಗಾಗಿ ಬದುಕಿದವನೇ ನಿನಗಾಗಿ ಸಾಯಬಲ್ಲನು' ಎಂಬುದು ತಂದೆ-ತಾಯಿಗಳಿಲ್ಲದ ಕಂದನು, ತಾನೇ ತಾಯಿತಂದೆಯಾಗಿ ಕಂದನಿಗಿತ್ತ ಸಂದೇಶವಾಗಿದೆ.

ಕಾಲೊಳಗಿನ ಹಾದಿಯನ್ನು ಕಳಕೊಂಡು, ದಿಕ್ಕುಗೆಟ್ಟು ಹಾದಿಯಿಲ್ಲದಲ್ಲಿ ಹೆಜ್ಜೆಯಿಡುತ್ತ ಹೋಗುವುದಾದರೂ ಎಲ್ಲಿಗೆ? ಹೊರಟವನ ಗತಿ ಏನಾದೀತು? ಅದಾವುದೋ ಒಂದು ಕುರಿ ಹಳ್ಳಕ್ಕೆ ಬಿದ್ದು, ಹಿಂಡನೆಲ್ಲ ಹಳ್ಳಕೂಡಿಸಲು ಆಣೆಯಾಗಿದೆ. ಅದರ ಪರಿಣಾಮವನ್ನು ಪ್ರಭುದೇವರ ಭಾಷೆಯಲ್ಲಿಯೇ ಕೇಳಬೇಕು-

*'ಊರದ ಚೇಳಿಂಗೆ, ಏರದ ವಿಷಕ್ಕೆ ಜಗವೆಲ್ಲ*
*ಉರುಳಿ ಹೊರಳಿ ನರಳಾಡುತ್ತಿದೆ'*

ಚೇಳು ಕಡಿದಿಲ್ಲ, ವಿಷ ಏರಿಲ್ಲ. ಆದರೆ ಜಗತ್ತು ಪಡುವ ಸಂಕಟಕ್ಕೇನು ಸೀಮೆಯಿದೆಯೇ? ಜಗತ್ತಿನ ಉರುಳಾಟ-ಹೊರಳಾಟ-ನರಳಾಟಗಳಿಗೆ ಒಂದೇ ಉಪಾಯವಿದೆ. ಅದನ್ನೂ ಹೇಳಿಬಿಟ್ಟಿದ್ದಾರೆ ಅಲ್ಲಮಪ್ರಭು. ಅದು ಬರಿ ನೋವು ಮಾತ್ರ ಕಳೆಯದೆ, ಬೇನೆಯನ್ನೇ ನಿರ್ಮೂಲ ಗೊಳಿಸಬಲ್ಲದು.

*'ಹುಟ್ಟಿದ ಗಿಡುವಿನ ಬಿಟ್ಟೆಲೆಯ ತಂದು*
*ಮುಟ್ಟದೆ ಪೂಜಿಸು ನಮ್ಮ ಗುಹೇಶ್ವರನ'*

ಹುಟ್ಟಲಾರದ ಗಿಡ ಎಲೆಬಿಟ್ಟಾಗ ಅದನ್ನು ಗುಹೇಶ್ವರನತ್ತ ಹೊರಳಿಸಬೇಕು. ಭಕ್ತಿಯಿಂದಲೋ ಸತ್ ಸಾಹಿತ್ಯಾಭ್ಯಾಸದಿಂದಲೋ ತೆರೆದ ಹೃದಯವನ್ನು ಪರಮಾತ್ಮನತ್ತ ಹೊರಳಿಸಿದರೆ, ಮಾನವನು ಅಜರಾಮರನಾಗುವುದರಲ್ಲಿ ಸಂಶಯವೇ ಇಲ್ಲ. ಅಜರಾಮರತೆ ಸಾಕೆನಿಸಿದಾಗ ಮರಣವೆಂಬ ಮಾನವಮಿಯ ಹಬ್ಬವನ್ನಾಚರಿಸುವ ದಾರಿಯಿದ್ದೇ ಇದೆ.

ಪ್ರಭುದೇವರು ಮಾಡಿದ ರಚನೆಯಲ್ಲಿ ಎರಡು ವಿಭಾಗಗಳನ್ನು ಮಾಡಬಹುದು. ಸಹಜಾರ್ಥವನ್ನು ಬೋಧಿಸುವ ಸಾಮಾನ್ಯ ವಚನಗಳು ಮತ್ತು ಆಳವಾದ ಅನುಭವವನ್ನು ರೂಪಕ-ದೃಷ್ಟಾಂತಗಳ ರೀತಿಯಲ್ಲಿ ಉಸಿರಿದ ಬೆಡಗಿನ ವಚನಗಳು. ಚಿಕ್ಕಂದಿನಿಂದಲೂ ಒಗಟು-ಒಡೆಗತೆಗಳ ಸವಿಯನು ಉಂಡ ಹಾಗೂ ಅದರ ಸೌಂದರ್ಯವನ್ನು ಕಂಡ ಕನ್ನಡಿಗರಿಗೆ ಪ್ರಭುವಿನ ಬೆಡಗಿನ ವಚನಗಳು ಅಷ್ಟೇನೂ ಗೂಢವೆನಿಸಿಸಲಿಕ್ಕಿಲ್ಲ; ಗಾಢವೆನಿಸಲಿಕ್ಕಿಲ್ಲ. ಉಕ್ಕಿನ ಕಡಲೆಯನ್ನು ಅಗೆಯುವುದಕ್ಕೆ ವಜ್ರದಂತರು ಹಿಂದು ಮುಂದು ನೋಡಲಿಕ್ಕಿಲ್ಲವಷ್ಟೇ?

*'ಮರದ ಮೇಲಿನ ಹಣ್ಣು ಕಂಡವನೊಬ್ಬ :*
*ಅದನ್ನು ಆಶಿಸಿದವನು ಬೇರೊಬ್ಬ;*
*ಮರವನ್ನೇರಿದವನು ಇನ್ನೊಬ್ಬ;*
*ಹಣ್ಣು ಹರಿದವ ಮತ್ತೊಬ್ಬ;*
*ಅದನ್ನು ತಿಂದವ ಮಗದೊಬ್ಬ;*
*ತೋಟಿಗನಿಂದ ಏಟು ತಿಂದವನೇ ಬಡಪಾಯಿ';*

ಇದು ಪ್ರಭುದೇವರ ಬೆಡಗಿನ ವಚನಗಳ ಶೈಲಿ. ಇದರರ್ಥ ಬಲು ಸರಳ, ಸುಲಭ. ಮರದ ಮೇಲಿನ ಹಣ್ಣೂ ಕಂಡಿದ್ದು ಕಣ್ಣು; ಅಥವಾ ಅದನ್ನಾಶಿಸಿದ್ದು ಮನಸ್ಸು. ಮರವನ್ನೇರಿದ್ದು ಕಾಲು; ಹಣ್ಣು ಹರಿದದ್ದು ಕೈ; ಅದನ್ನು ತಿಂದಿದ್ದು ಬಾಯಿ; ಏಣು ತಿಂದದ್ದು ಬೆನ್ನು.

ಸುಣ್ಣದ ಗುಡಿಯ ಸುತ್ತಲಾರೆ, ಹುಣಸೆ ಪಕ್ಕ ಎಣಿಸಲಾರೆ, ಇತ್ಯಾದಿ. ಇದೊಂದು ಜಾನಪದ ಒಗಟು ಅಥವಾ ಒಡೆಗತೆ. ಗುಡಿಯೆಂದರೆ ಆಕಾಶ; ಹುಣಸೆ ಪಕ್ಕವೆಂದರೆ ನಕ್ಷತ್ರಗಳು-ಎಂದು ಹೇಳಿದರೆ ಸಾಕಲ್ಲವೇ?

'ಕೋಡಗನ್ನ ಕೋಳಿ ನುಂಗಿತ್ತ' ಎಂಬ ಚುಟುಕು ಮಾತನ್ನು ತಿರುಪೆಯವರ ಬಾಯಲ್ಲಿ ಕೇಳುತ್ತೇವೆ. ಚಂಚಲ ಮನವೇ ಕೋಡಗ. ಅದನ್ನು ನುಂಗಿಹಾಕುವ ಜ್ಞಾನವೇ ಕೋಳಿ. ಬೆಡಗಿನ ವಚನಗಳಿಂದ ಒಗಟು ಒಡೆಗತೆ ಹುಟ್ಟಿಕೊಂಡವೋ, ಒಗಟು-ಒಡೆಗತೆಗಳಿಂದ ಬೆಡಗಿನ ವಚನಗಳು ಹುಟ್ಟಿಕೊಂಡವೋ ಹೇಳುವುದು ಕಷ್ಟ. ಗಿಡ ಮೊದಲೋ ಬೀಜ ಮೊದಲೋ? ಬೀಜ ಗಿಡಕ್ಕೆ ತಂದೆಯೂ ಅಹುದು; ಮಗನೂ ಅಹುದು.





# ಮಹಾಮಹಿಮ ಬುದ್ಧ

- ವಿದ್ಯಾವಾಚಸ್ಪತಿ ಕವಿತಾಕೃಷ್ಣ *

**ಭಾ**ರತವು ಧರ್ಮದ ಮೂಲಕ ಜಯವನ್ನು ಗಳಿಸುತ್ತದೆ ಎಂಬ ಪ್ರಾಚೀನವಾಣಿ ಸತ್ಯಸ್ಯ ಸತ್ಯವೆನಿಸಿದೆ. ಅದು ಅಹಿಂಸೆ ಮತ್ತು ಪ್ರೀತಿಗಳ ಮೂಲಕವಾಗಿ ಎಲ್ಲವನ್ನೂ ಗೆದ್ದಿದೆ. ಧರ್ಮದ ಮೂಲಕವಾಗಿ ಗೆದ್ದು ನಿಂತ ವೀರನನ್ನು ಭಾರತ ಮಹಾತ್ಮ ಎಂದು ಕರೆದಿದೆ. ಕತ್ತಿ ಹಿಡಿದು ರಕ್ತಪಾತ ಮಾಡಿ ಗೆದ್ದ ವೀರನನ್ನು ಅದು ಮಹಾತ್ಮ ಎಂದು ಕರೆದಿದ್ದ ಎಂಬುದು ಗಮನಾರ್ಹ ಸಂಗತಿ. ಭಾರತದ ಧರ್ಮ ಸಂಸ್ಕೃತಿ, ನಾಗರಿಕತೆಗಳು ವಿಶ್ವದಲ್ಲಿಯೇ ಭಿನ್ನವಾದವು, ಅನನ್ಯವಾದವು. ಗೌತಮ ಬುದ್ಧನನ್ನು ಭಾರತ ಮಹಾತ್ಮ ನೆಂದು ಕರೆದು ಗೌರವಿಸಿದೆ. ವಿಶಿಷ್ಟ ಸ್ಥಾನವನ್ನು ನೀಡಿ ಪುರಸ್ಕರಿಸಿದೆ. ಆತನ ದಿವ್ಯ ಸಂದೇಶದ ಸಾರವನ್ನು ಅಂಗೀಕರಿಸಿದೆ. ನಿಜಕ್ಕೂ ಬುದ್ಧನಿಗೆ ಭಾರತದಲ್ಲಿ ಒಂದು ವಿಶೇಷ ಮನ್ನಣೆ ಇದೆ. ಏಕೆಂದರೆ ಆತ ಭಾರತೀಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದವ, ಕಾಲಧರ್ಮಕ್ಕೆ ಸ್ಪಂದಿಸಿ ಆಲೋಚನೆಯನ್ನು ಮಣ್ಣಿನ ವಾಸನೆಗೆ ಅನುಗುಣವಾಗಿ ಮುಕ್ತಗೊಳಿಸಿದವ. ಚಿಂತಕರಲ್ಲಿ ಚಿಂತಕ, ಸಾಧಕರಲ್ಲಿ ಸಾಧಕ.

ಗೌತಮ ಬುದ್ಧ ಅತ್ಯಂತ ಪರಮಶುದ್ಧನೆನಿಸಿದ ಸಿದ್ಧಾಂತವೊಂದನ್ನು ರೂಪಿಸಿದ. ಅದನ್ನು ಪರಿಣಾಮಕಾರಿಯಾಗಿ ಜನ ಮನೋಭೂಮಿಕೆಯಲ್ಲಿ ಬಿತ್ತಿದ. ಎಲ್ಲರ ಬದುಕು ಹಸನುಗೊಳಿಸಲು, ಉದ್ಧಾರಮಾಡಲು ಮುಂದಾದ, ಸ್ವಾರ್ಥವನ್ನು ಬದಿಗಿರಿಸಿ ಪರಾರ್ಥಕ್ಕಾಗಿ ಅಹರ್ನಿಶಿ ಶ್ರಮಿಸಿ, ಅವನು ದೊಡ್ಡವನಾದ, ಮಹಾತ್ಮನಾದ. ಇಂದು ಭಾರತದಲ್ಲಿ ಬೌದ್ಧಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿ ಇಲ್ಲದೇ ಹೋದರೂ ಬುದ್ಧನ ಅಪೂರ್ವ ಸಂದೇಶಗಳು ಭಾರತೀಯರ ಭವ್ಯ ಬದುಕಿನಲ್ಲಿ ಲೀನವಾಗಿವೆ. ಈ ಹೊತ್ತಿನ ಬ್ರಾಹ್ಮಣ ಪಂಥದ ಮೇಲೆ ಗೌತಮನ ದಿವ್ಯ ಬೋಧನೆಗಳ ಗಾಢ ಪ್ರಭಾವವಿದೆ. ಅಲ್ಲದೆ ಹಿಂದುಗಳ ಅತ್ಯಂತ ವಿಶಿಷ್ಟ ಅಭ್ಯಾಸಗಳು ಮತ್ತು ನಂಬುಗೆಗಳು ಬುದ್ಧನು ಹೇಳಿದ ವಿಚಾರಗಳಿಂದ ಪ್ರಭಾವಿತವಾಗಿದೆ ಎಂಬ ಸರ್ ಎಡ್ವಿನ್ ಆರ್ನಾಲ್ಡ್ ಅವರ ಮಾತುಗಳು ಇದನ್ನೇ ಹೇಳುತ್ತವೆ. ಬುದ್ಧ ಭಾರತೀಯರ ಹೃದಯದಲ್ಲಿ ನೆಲಸಿದ್ದಾನೆ. ಆತನ ಸಂದೇಶ ಭಾರತೀಯನ ಬದುಕಿನಲ್ಲಿ ಮೈಗೂಡಿ ಹೋಗಿದೆ.

**ಬುದ್ಧನ ಬದುಕಿನ ಹಿನ್ನಲೆ :**

ಬುದ್ಧನ ಪೂರ್ವಾಶ್ರಮದ ಹೆಸರು ಸಿದ್ಧಾರ್ಥ. ಆತ ಶಾಕ್ಯವಂಶದವನು, ಕಪಿಲವಸ್ತು ಅವನ ಊರು. ರಾಜ ಶುದ್ಧೋಧನರಾಯನೇ ತಂದೆ. ರಾಣಿ ಮಾಯಾದೇವಿಯೇ ತಾಯಿ, ಏಕೈಕ ಪುತ್ರನಾಗಿ ಅರಮನೆಯಲ್ಲಿ ಜನಿಸಿ, ಸುಕುಮಾರನಾಗಿ ಸುಕೋಮಲವಾಗಿ ಬೆಳೆದನು. ಕ್ಷತ್ರಿಯ ಗುಣಗಳೂ ಮೈಗೂಡಿದ್ದವು. ಸುಕೋಮಲ ಸ್ವಭಾವ 'ದೊಂದಿಗೆ ರಾಜೋಚಿತವಾದ ಧೀರಗುಣವೂ ಮೇಳೈಸಿತ್ತು. ಸಿದ್ಧಾರ್ಥ ಚಕ್ರವರ್ತಿಯಾಗುವುದನ್ನೇ ಎದುರು ನೋಡುತ್ತಿದ್ದ. ಆದರೆ ಸಿದ್ಧಾರ್ಥ ಚಕ್ರವರ್ತಿಯಾದುದು ಕತ್ತಿ, ರಕ್ತಪಾತಗಳಿಂದಲ್ಲ, ತನ್ನನ್ನು ತಾನು ಮೊದಲು ಗೆದ್ದು, ವಿಶ್ವದ ಕೋಟಿ ಕೋಟಿ ಜನರ ಮನಸ್ಸನ್ನು ಗೆಲ್ಲುವುದರ ಮುಖಾಂತರ ಚಕ್ರವರ್ತಿಯಾದ.

ಯಶೋಧರ ಎಂಬ ಯುವತಿಗೊಡನೆ ಸಿದ್ಧಾರ್ಥನ ವಿವಾಹವಾಗಿತ್ತು. ಸುಂದರ ಮಡದಿ ಜನತೆಗೆ ರಾಜ್ಯ, ಪದವಿ, ಪಟ್ಟ, ಅರಮನೆ, ಸಿರಿ-ಸಂಪತ್ತು, ಅಖಿಲ ಭೋಗ ವಿತ್ತು. ರಾಹುಲ ಎಂಬ ಮಗನೂ ಜನಿಸಿದ. ಆದರೆ ಅವನ ಬದುಕಿನಲ್ಲಿ ನಡೆದ ಘಟನೆಗಳು ವಿರಾಟ ರೂಪ ತಾಳಿನಿಂದವು. ಸಾವು, ಮುಪ್ಪು, ರೋಗ, ನೋವುಗಳನ್ನು ಕಂಡು ಮಮ್ಮಲ ಮರುಗಿದ. ಶಾಕ್ಯ ಸಂಘ ಪರಿವಾರದ ಕೆಂಗಣ್ಣಿಗೆ ಗುರಿಯಾದ. ನಾಡು ತೊರೆಯಲು ನಿರ್ಧರಿಸಿದ ನಡುರಾತ್ರಿ ನಾಡ ಬಿಟ್ಟು ಕಾಡು ಸೇರಿದ. ಜೀವನ ರಹಸ್ಯ ತಿಳಿಯಲೋಸುಗವಾಗಿ ವರ್ಷಗಟ್ಟಲೆ ಕಾಡಿನಲ್ಲಿ ಅಲೆದಾಡಿದ. ಕೊನೆಗೊಮ್ಮೆ ಗಯಾಕ್ಷೇತ್ರಕ್ಕೆ ಬಂದ. ಬೋಧಿ ವೃಕ್ಷವೊಂದನ್ನು ಕಂಡ ಈ ಜಾಗದಲ್ಲಿ ನನ್ನ ಶರೀರ ನಶಿಸಲಿ, ಬರಿಯ ಚರ್ಮ ಮಾಂಸ ಮತ್ತು ಎಲುಬಿನ ಗೂಡು ಕ್ಷೀಣಿಸಲಿ, ಪರಮಸತ್ಯವನ್ನು ತಿಳಿಯದ ಹೊರತು ಇಲ್ಲಿಂದ ಕೊಂಚವೂ

* ಚಂದ್ರಮೌಳೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು - ೫೭೨೧೦೪.

ಚಲಿಸುವುದಿಲ್ಲ ಎಂಬ ದೃಢ ನಿರ್ಧಾರ ಮಾಡಿ ಕುಳಿತ. ತಪಸ್ಸು ಸಾಗಿತು, ಆಸೆ ಫಲಿಸಿತು. ಪರಮ ಸತ್ಯದ ಗೋಚರವಾಯಿತು. ಹಗಲಿನ ಬೆಳಕು ಮೀರಿಸುವ ಬೆಳಕು ಕಂಡಿತು. ಈಗ ಆತನು ಪರಮಜ್ಞಾನಿಯಾಗಿ ಮೇಲೆದ್ದ.

ಆನಂತರ ಲೋಕಕಲ್ಯಾಣ ಮಾಡಲು ಬಯಸಿದ ಬುದ್ಧನು ವಾರಣಾಸಿಗೆ ಬಂದ ಅಲ್ಲಿಂದ ಧರ್ಮೋಪದೇಶ ಮಾಡಲಾರಂಭಿಸಿದ. ೪೦ ವರ್ಷಗಳ ಕಾಲ ನಿರಂತರವಾಗಿ ಬುದ್ಧದೇವನು ತನ್ನ ತತ್ವಗಳನ್ನು ಜನತೆಗೆ ಸಾರಿದನು. ಆಳಿನಿಂದ ಅರಸನವರೆಗೆ ಎಲ್ಲರ ಪ್ರೀತಿಗೆ ಪಾತ್ರನಾದನು. ನೊಂದವರನ್ನು ಸಂತೈಸಿದನು. ಅನುಯಾಯಿಗಳಿಗೆ ಮಾರ್ಗ ದರ್ಶನ ನೀಡಿದನು, ಅಶೋಕನಂತಹ ವೀರಾಗ್ರಣಿ ಬುದ್ಧಧರ್ಮಕ್ಕೆ ಶರಣಾದ ಶಿಲಾಶಾಸನಗಳನ್ನು ಕೆತ್ತಿಸಿದ. ಬೌದ್ಧಧರ್ಮದ ಪ್ರಸಾರಕ್ಕೆ ವಿಶೇಷವಾಗಿ ಶ್ರಮಿಸಿದ.

ಬುದ್ಧನ ಬದುಕು, ನುಡಿ-ನಡೆಗಳನ್ನು ಅರಿವು ಮಾಡಿ ಕೊಂಡ ಸ್ವಾಮಿ ವಿವೇಕಾನಂದರು 'ಚರಿತ್ರೆಯಲ್ಲಿ ಬುದ್ಧ ನಷ್ಟು ಎತ್ತರಕ್ಕೆ ಏರಿದವರನ್ನು ಒಬ್ಬನನ್ನಾದರೂ ತೋರಿಸಿ' ಎನ್ನುತ್ತಾರೆ. ನಿಮಗೆ ನೀವೇ ದಾರಿದೀಪ, ಅನ್ಯರ ಆಶ್ರಯಕ್ಕೆ, ನೀವು ಹೋಗದಿರಿ, ಸತ್ಯವೇ ದಾರಿದೀಪ. ಸದಾ ಜಾಗೃತ ರಾಗಿರಿ. ನಿತ್ಯ ತ್ಯಾಗವೇ ದಾರಿ. ಎಚ್ಚರವಿಲ್ಲದ ಸ್ಥಿತಿಯು ಸಾವಿಗೆ ದಾರಿ. ತನ್ನನ್ನೇ ತಾನೇ ನಿಗ್ರಹಗೊಳಿಸಿಕೊಂಡು, ತನಗೆ ತಾನೇ ಅಧೀನನಾಗುವುದರ ಮುಖಾಂತರ ಎಚ್ಚರ ಗೊಳ್ಳುವವನು. ಯಾವ ಪ್ರವಾಹಕ್ಕೂ ಜಗ್ಗದ ದ್ವೀಪವಾಗಿ ಪರಿವರ್ತಿತನಾಗುವವನು ಎಂದು ದಿವ್ಯ ಸಂದೇಶ ನೀಡಿದ ಬುದ್ಧನು ವಿಶ್ವದ ಪ್ರವಾದಿಗಳಲ್ಲಿ ಅತ್ಯಂತ ಶ್ರೇಷ್ಠನಾಗಿ ಕಂಡು ಬರುತ್ತಾನೆ.

ಬುದ್ಧನು ಕ್ರಿ.ಪೂ. ೩೪೩ರಲ್ಲಿ ನಿರ್ವಾಣವನ್ನು ಹೊಂದಿದ. ಆತನಿಂದ ಉದಯವಾದ ಬೌದ್ಧಧರ್ಮ ವಿಶ್ವದ ಹಲವೆಡೆ ಇಂದೂ ಜೀವಂತವಾಗಿದೆ.



## ಆಲಸ್ಯ ಜೀವನ

ಸೇವೆ, ತ್ಯಾಗ, ಮಾನವೀಯತೆಗಳನ್ನು ಬಿತ್ತಿದ್ದರವರು ಧರ್ಮದೀಪಕರು. ಅವರು ಸಾರ್ವಕಾಲಿಕ ಸ್ಮರಣೀಯರು. ಅವರ ಸಾಲಿನಲ್ಲಿ ಬಸವಣ್ಣನವರೂ ಒಬ್ಬರು. ಅವರು ತುಳಿದ ಹಾದಿ ವಿಶಿಷ್ಟವಾದದ್ದು, ವಿಚಾರಪೂರ್ಣವಾದದ್ದು. ಆಚಾರ ಸಮನ್ವಿತವಾಗಿ ವಿನೂತನವೆನಿಸಿದ್ದು. ಬಸವಣ್ಣನವರು ಬಿತ್ತಿದ್ದು, ಬೆಳೆದದ್ದು ಕ್ರಿಯಾಜ್ಞಾನಸಮನ್ವಿತವಾದ ಮಾನವಧರ್ಮ. ಅದು ಅಷ್ಟಕ್ಕೇ ಸೀಮಿತವಾಗಲಿಲ್ಲ. *'ಸಕಲ ಜೀವರಿಗೆ ಲೇಸನೇ ಬಯಸುವ'* ವಿಶ್ವಧರ್ಮವಾಯಿತು. ಇಂದು ವಿಜ್ಞಾನ *'ಜಗದಗಲ ಮುಗಿಲಗಲ'* ಬೆಳೆಯುತ್ತಿದೆ, ನರ್ತಿಸುತ್ತಿದೆ. ಹೊಸ ಹೊಸ ಸಂಶೋಧನೆಗಳ ಆವಿಷ್ಕಾರವಾಗುತ್ತಿದೆ. ಊಹಿಸಲೂ ಅಸಾಧ್ಯವೆನಿಸುವ ಪ್ರಗತಿ ಕಾಣುತ್ತಿದೆ. ಆದರೆ ವಿನಾಶಮುಖಿಯಾಗುತ್ತ ನಡೆದಿದೆ. ಜ್ಞಾನ-ವಿಜ್ಞಾನ- ತಂತ್ರಜ್ಞಾನಗಳೆಲ್ಲ 'ಆತ್ಮಜ್ಞಾನ'ವನ್ನು ತಿಳಿಯುವುದಕ್ಕೆ ಸಹಾಯಕ ವಾಗಬೇಕು. 'ಬಾಂಬು'ಗಳ ನಿರ್ಮಾಣದಿಂದ ಲೋಕಕ್ಕಾಗುವ ಕಲ್ಯಾಣ ವಾದರೂ ಯಾವುದು?

ಪರಮಾತ್ಮನನ್ನು ನಂಬಲು ವಿಜ್ಞಾನ ಮಾಧ್ಯಮವಾಗಬೇಕು. ಏಕೆಂದರೆ 'ವಿಜ್ಞಾನಿ' ಎಂದೂ ಸೃಷ್ಟಿಕರ್ತನಾಗಲಾರ. ಸೃಷ್ಟಿಯಲ್ಲಿ ನಿಕ್ಷೇಪವಾಗಿರುವ 'ಭಗವದ್ವಿಧಿ'ಯನ್ನು ಅನಾವರಣಗೊಳಿಸ ಬಲ್ಲನಷ್ಟೇ. ಮಾನವನ ಜೀವಿತಾವಧಿ ಹೆಚ್ಚೇನಲ್ಲ, ಇರುವಷ್ಟು ಕಾಲ ಆನಂದವನ್ನನುಭವಿಸುವ, ಆನಂದವನ್ನು ನೀಡುವ *'ಆನಂದಮಯ ಈ ಜಗಹೃದಯ'* ಎಂಬ ಕವಿ ವಾಣಿಯನ್ನು ಅರಿಯುವವನಾಗ ಬೇಕು. ಏಕೆಂದರೆ ಪ್ರಪಂಚವೆಂಬುದೊಂದು ತಪೋರಂಗ, ಕರ್ಮಕ್ಷೇತ್ರ, ಸಾಧನಾ ಕಮ್ಮಟ. ಯಾರೇ ಆಗಲಿ ತನ್ನಲ್ಲಿ ಅಡಗಿರುವ ಶಕ್ತಿಯನ್ನು ಚಾಲಗೊಳಿಸಬೇಕು. ಅದರ ಸದುಪಯೋಗ ಪಡೆದುಕೊಂಡು ಇತರರಿಗೂ ನೀಡುವುದಾಗಬೇಕು. ಇತ್ತೀಚಿನ ದಿನಗಳಲ್ಲಿ 'ಆಲಸ್ಯ' ಜೀವನ ನಾಗರಿಕತೆಯ ಲಕ್ಷಣವಾಗುತ್ತಿದೆ. ಸದ್ಭಾವನೆಯ ಬಧುಕು ಎಂದರೆ ಕ್ರಿಯಾಶೀಲ ಜೀವನ ಅಪರೂಪವಾಗುತ್ತಿದೆ. ಇದರಿಂದಾಗಿ ಕುಟುಂಬಗಳು, ಸಮಾಜ, ದೇಶ ದಾರಿದ್ರ್ಯದ ಕಹಿಯನ್ನುಣ್ಣು ವಂತಾಗಿದೆ. ಜನನಾಯಕರು ಕೇವಲ 'ಓಟು ಬ್ಯಾಂಕು'ಗಳ ಸಂಸ್ಥಾಪನೆ, ಸಂವರ್ಧನೆ, ಸಮರ್ಪಣೆಯಾಗದ ಹೊರತು ಭವಿಷ್ಯವಾದರೂ ಎಂತು ಸಾಧ್ಯ?







## ಅಥಣಿ ಅಪ್ಪಗಳು

- ಟಿ.ಆರ್. ಮಹಾದೇವಯ್ಯ *

'ಮಹಾತ್ಮಾರಂ ಘನಮನಸಂಪನ್ನರಂ ನೆನೆವುದೆ ಮುಕ್ತಿಪದಂ ಶಿವಾಧನಾ' ಎಂದಿದ್ದಾರೆ ಮೊಗ್ಗೆಯ ಮಾಯಿ ದೇವ ಶಿವಯೋಗಿಗಳು. ಸಿದ್ಧಗಂಗೆಯಲ್ಲಿ ಈ ಸಲದ ಜಾತ್ರೆಯ ವಿಶೇಷ ಜ್ಞಾನದಾಸೋಹಕ್ಕೆ ಎಂಟತ್ತು ಶಿವಯೋಗಿಗಳನ್ನು ನೆನೆಯುವ ಸಂದರ್ಭವನ್ನು ಪರಮಪೂಜ್ಯರು ಒದಗಿಸಿದ್ದಾರೆ. ಶಿವಯೋಗಿಗಳನ್ನು ನಾವು ನೆನೆಯಬೇಕು? ಹೇಗೆ? ಸಿದ್ಧರಾಮ ಶಿವಯೋಗಿಗಳು 'ಶರಣರ ಇರವ ನೆನೆನೆನೆದು ಶರಣನಾದೆನಯ್ಯ' ಎಂದು ದೃಷ್ಟಾಂತವಾಗಿ ನಿಂತಿದ್ದಾರೆ. ಈ ದಿನ ನಾವು ಅಥಣಿಯ ಮುರುಘೇಂದ್ರ ಶಿವಯೋಗಿಗಳ ಬಗ್ಗೆ ತಿಳಿದುಕೊಳ್ಳುವ ಪ್ರಯತ್ನ ಮಾಡೋಣ. ದೊಡ್ಡವರ ಬದುಕಿನ ಬೆಳಕಿನ ಹೆಜ್ಜೆಗಳು ನಮ್ಮ ಮನದಲ್ಲಿ ಮಾಡಿ ಪಾವನರಾಗೋಣ.

ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳು 'ಅಥಣಿಯ ಅಪ್ಪ'ಗಳೆಂದೇ ಪ್ರಸಿದ್ಧರಾಗಿದ್ದಾರೆ. ಅನುಪಮ ಚರಿತರೆನಿಸಿದ ಅವರು ಅದ್ಭುತವಾದ ಮಾನವ ಹಿತಸಾಧನೆ ಯನ್ನು ಮಾಡಿದ್ದಾರೆ. ಅವರನ್ನು ಕುರಿತು ವಿಪುಲವಾದ ಸಾಹಿತ್ಯ ಸೃಷ್ಟಿಯಾಗಿದೆ. 'ಶಿವಯೋಗೀಶ್ವರ ಚಾರಿತ್ರ', 'ಶ್ರೀಮದಥಣಿ ಶಿವಯೋಗೀಶ್ವರ ಚರಿತ್ರೆ', 'ಅಥಣಿ ಗಚ್ಚಿನ ಮಠದ ಬಾಲಶಿವಯೋಗಿವರ್ಯ', 'ಜಂಗಮಜ್ಯೋತಿ' 'ಸ್ತೋತ್ರರೂಪದ ಪದ್ಯಮಾಲಿಕೆ'ಗಳನ್ನು ಇಲ್ಲಿ ಹೆಸರಿಸ ಬಹುದು. ಸಿದ್ಧಗಂಗೆಯ ಪೂಜ್ಯರಿಗೆ ಅರ್ಪಿಸಿದ ಶತ ಮಾನೋತ್ಸವ ಗ್ರಂಥಮಾಲೆಯಲ್ಲಿ ಅವರ ಪುಣ್ಯಚರಿತ್ರೆ ಗ್ರಂಥ ಸೇರ್ಪಡೆಯಾಗಿದೆ. ಅಥಣಿ ಅಪ್ಪಗಳ ಜೀವನ-ಸಾಧನೆ ಗಳನ್ನು ಕುರಿತು ವಿಶೇಷ ಅಧ್ಯಯನ ಮಾಡಿ ಸಂಶೋಧನ ಪ್ರಬಂಧವೊಂದು ಪಿ.ಹೆಚ್‌ಡಿ.ಗಾಗಿ ಸಾದರಗೊಂಡಿರು ವುದನ್ನು ಇಲ್ಲಿ ಉಲ್ಲೇಖಿಸಬಹುದು.

ಧಾರವಾಡದಲ್ಲಿ ಹಾವೇರಿ ಪೇಟೆಯಲ್ಲಿ ಅವರ ಹೆಸರಿನ ಮಠವೊಂದು ಬಹಳ ಹಿಂದೆಯೇ ಸ್ಥಾಪನೆಯಾಗಿದೆ. ಅಥಣಿ ಶಿವಯೋಗಿಗಳ ಕರಕಮಲ ಸಂಜಾತರಾದ ಪೂಜ್ಯಶ್ರೀ ಮೃತ್ಯುಂಜಯಸ್ವಾಮಿಗಳು ಅದನ್ನು ಅವಿಮುಕ್ತಕ್ಷೇತ್ರವಾಗಿ ಬೆಳೆಸಿದ್ದಾರೆ. ವಿದ್ಯಾರ್ಥಿಗಳಿಗಾಗಿ ತ್ರಿಷಷ್ಠಿ ಪುರಾತನರ ಹೆಸರಿನಲ್ಲಿ ಸುತ್ತಲೂ ೬೩ ಕೊಠಡಿ ಗಳನ್ನು ಕಟ್ಟಿಸಿ ನಡುವೆ ಅಥಣಿ ಶಿವಯೋಗಿಗಳ ಹಾಲು ಗಲ್ಲಿನ ಪ್ರತಿಮೆಯನ್ನು ಸ್ಥಾಪಿಸಿದ್ದಾರೆ. ಶ್ರೀಮಠದಲ್ಲಿ ನಿರಂತರವಾಗಿ ಅವರ ಹೆಸರಿನಲ್ಲಿ ಅನ್ನ, ಜ್ಞಾನ ಹಾಗೂ ಆಧ್ಯಾತ್ಮ ದಾಸೋಹಗಳು ನಡೆಯುತ್ತಿವೆ. ವರ್ಷಕ್ಕೊಮ್ಮೆ ಶಿವಯೋಗಿಗಳ ಹೆಸರಿನಲ್ಲಿ ಜಾತ್ರೆ ಕೂಡ ನಡೆಯುತ್ತದೆ.

ನಮ್ಮ ನಾಡು ಅನೇಕ ಶಿವಯೋಗಿಗಳನ್ನು ಕಂಡಿದೆ. ಆ ಸಾಲಿನಲ್ಲಿ ವಿಭಿನ್ನವೂ, ವಿಶಿಷ್ಟವೂ ಆದ ವ್ಯಕ್ತಿತ್ವವುಳ್ಳವ ರೆಂದರೆ-ಮುಳುಗುಂದದ ಬಾಲಲೀಲಾ ಮಹಂತಶಿವ ಯೋಗಿಗಳು ಮತ್ತು ಬಾಲಯೋಗಿ ಅಥಣಿಯ ಮುರುಘೇಂದ್ರ ಶಿವಯೋಗಿಗಳು. ಮಹಂತ ಶಿವಯೋಗಿ ಗಳು ಪ್ರೌಢರಾದರೂ ಮಗುವಿನ ಮುಗ್ಧತೆಯನ್ನು ಮೆರೆದ ಬಾಲವತ್ ಯೋಗಿ. ಅವರ ಲೀಲಾ ವಿನೋದಗಳು ಜನರ ಮನೆಮಾತಾಗಿವೆ. ಅವರು ರಚಿಸಿದ ಆಧ್ಯಾತ್ಮ ಗೀತೆಗಳು ಜನರ ನಾಲಗೆಯ ಮೇಲೆ ನಲಿಯುತ್ತಿವೆ.

ಶ್ರೀ ಮುರುಘೇಂದ್ರ ಶಿವಯೋಗಿಗಳು ಹುಟ್ಟು ವಿರಾಗಿಗಳು. ಮಲ್ಲಿಗೆ ಬಳ್ಳಿಯು ನರುಗಂಪು ಸೂಸಲು ಸಮಯ ಬೇಕು. ಅದು ದಾಂಗುಡಿಯಿಟ್ಟು ಮೊಗ್ಗು ಕಟ್ಟಿ ಅವು ಅರಳಿದಾಗ ಸುವಾಸನೆ ಹೊಮ್ಮುತ್ತದೆ. ಅದೇ ಮರುಗ, ದವನಗಳು ಹುಟ್ಟುತ್ತಿದ್ದಂತೆ ಸುವಾಸನೆ ಹೊತ್ತೇ ಬರುತ್ತವೆ. ಅದರಂತೆ ಈ ಯೋಗಿ ಹುಟ್ಟು ಸನ್ಯಾಸಿ, ವೈರಾಗ್ಯದ ಅಲರು. ತೀರಾ ಚಿಕ್ಕ ವಯಸ್ಸಿನಲ್ಲೇ ಅವರು ದೀಕ್ಷೆ ಹೊಂದಿ ಕಫನಿ, ಕಡಾವಿಗೆ ಕೊಟ್ಟರು. ಆ ಬಾಲಯೋಗಿಯ ಚಿತ್ರ ದೊರಕಿದೆ. ನೋಡಬೇಕು ಆ ಬಾಲ ಸಂನ್ಯಾಸಿಯ ಮುಗ್ಧತೆ- ಸ್ನಿಗ್ಧತೆಯ ಹಿಂದೆ ಪ್ರಜ್ವಲಿಸುವ ಅಧ್ಯಾತ್ಮ ಕಳೆಯನ್ನು!

ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಹಳ್ಳಿ ಇಂಗಳ ಗಾವಿಯ ಪ್ರವಚನ ಕಾಯಕದ ರಾಚಯ್ಯ ಮತ್ತು

* ೧೩೬, ೧ನೇ ಮೈನ್, ೧ನೇ ಬ್ಲಾಕ್, ನಾಗರಭಾವಿ ೨ನೇ ಹಂತ, ಬೆಂಗಳೂರು-೫೬೦ ೦೭೨.

ನೀಲಮ್ಮನವರ ಮೂರನೇ ಮಗನಾಗಿ ಇವರು ೧೮೩೬ ರಲ್ಲಿ ಜನಿಸಿದರು. ಬಡತನ, ಮನೆತುಂಬ ಮಕ್ಕಳು. ಆದಾಯ ಕಡಿಮೆ. ಇದನ್ನು ಗಮನಿಸಿದ ಊರಿನ ಗೌಡರು ರಾಚಯ್ಯನವರಿಗೆ ೨೫ ಎಕರೆ ಜಮೀನನ್ನು ಕೊಟ್ಟರು. ಆದರೆ ವಿರಾಗಿಗಳಾದ ಅವರಿಗೆ ಆ ಕಡೆ ಗಮನವೇ ಇಲ್ಲ. ಗೌಡರೇ ಆ ಜಮೀನಿನಲ್ಲಿ ಕಡ್ಲೆ ಬಿತ್ತಿಸಿ ಆರೈಕೆ ಮಾಡಿದರು. ಬೆಳೆ ಬಂದ ಮೇಲೆ ಹತ್ತು ಮೂಟೆ ಕಡ್ಲೆ ತಂದು ಹಾಕಿದರು. ಮನೆಯವಾರೂ ಅತ್ತ ತಿರುಗು ನೋಡಿರಲಿಲ್ಲ! ಆ ಊರಿನ ಇಬ್ಬ ಬಡ ವಿಧವೆ ಕಂದಾಯ ಕಟ್ಟಲಾಗದೆ ಶಿಕ್ಷೆ ಅನುಭವಿಸಬೇಕಾದ ಪ್ರಸಂಗ ತಿಳಿದು ಕಡ್ಲೆ ಮೂಟೆಗಳನ್ನು ಮಾರಿಸಿ ಅವಳಿಗೆ ನೆರವಾದರಂತೆ! ಅಂಥಾ ಆಶಾರಹಿತ ಮನೆತನದಲ್ಲಿ ಹುಟ್ಟಿದ ಶಿಶು ಲೋಕವೇ ತನ್ನ ಮನೆ, ಜೀವಿಗಳೆಲ್ಲಾ ತನ್ನವರು ಎಂದು ಭಾವಿಸಿ ಸಾಧನೆಗೈದುದು ಏನಾಶ್ಚರ್ಯ!

ವೈರಾಗ್ಯದ ಪ್ರತಿಮೂರ್ತಿಯಂತಿದ್ದ ತೇಜಸ್ವಿ ಬಾಲನನ್ನು ತಂದೆ-ತಾಯಿ ಅಥಣಿ ಮಠಕ್ಕೆ ಕರೆದೊಯ್ದು ಗುರುವಿಗೆ ಒಪ್ಪಿಸಿದರು. ಶಿವಬಸವಸ್ವಾಮಿಗಳು ವಟುವಿಗೆ ವಿಧ್ಯುಕ್ತ ದೀಕ್ಷೆ ನೀಡಿ ನಿಜವಾದ ಸಂನ್ಯಾಸಿ ಮಾಡಿದರು. ಆನಂತರ ಅವರು ಅಧ್ಯಯನಕ್ಕೆ ತೊಡಗಿದರು. ಶರಣರ ಕಾಯಕ-ದಾಸೋಹಗಳ ನೆಲೆ-ಕಲೆಯನ್ನು ಅರಿತರು. ಗುರುಗಳ ಸೇವೆ ಮಾಡಿ ಅವರ ಅನುಗ್ರಹವನ್ನು ಸಂಪಾದಿಸಿದರು. ಅವರ ಆದೇಶದಂತೆ ಲೋಕ ಸಂಚಾರ ಕೈಕೊಂಡರು. ಅಲ್ಲೂ ಸಹ ಅಧ್ಯಯನ, ಶಿವಯೋಗ ಸಾಧನೆ ಮಾಡಿದರು. ಸುಕ್ಷೇತ್ರಗಳಲ್ಲಿ ಅನುಷ್ಠಾನ ಮಾಡಿದರು. ಅವರಲ್ಲಿದ್ದ ಹುಟ್ಟರಿವು ಪೂರ್ಣ ವಿಕಾಸಗೊಂಡು ಅವರ ಕ್ರಿಯೆಗಳಲ್ಲಿ ಸುವ್ಯಕ್ತಗೊಳ್ಳ ತೊಡಗಿತು.

ಊರಿಗೆ ಹಿಂತಿರುಗಿದ ಮೇಲೂ ಯಾವ ಅಧಿಕಾರ, ಪಟ್ಟವನ್ನು ಒಲ್ಲದೆ ಸ್ವತಂತ್ರರಾಗಿ ನಿಂತರು. ತಮಿಳುನಾಡಿನ ತ್ರಿಷಷ್ಟಿಪುರಾತನರು (೬೩ ಶಿವಭಕ್ತರು) ಮತ್ತು ಬಸವಾದಿ ಶರಣರು ಅವರಿಗೆ ಆದರ್ಶ. ಮಂಟಪಪೂಜೆ ಮಾಡಿಸುವ ಮೂಲಕ ಪುರಾತನರನ್ನು, ಬಸವಪುರಾಣದ ಪ್ರವಚನದ ಮೂಲಕ ಶರಣರನ್ನು ಪರಿಚಯಿಸಿ ಜನರಲ್ಲಿ ಭಕ್ತಿಭಾವ ಮೂಡಿಸಲು ಯತ್ನಿಸಿದರು. ಅವರ ಮಹಿಮೆ ಎಲ್ಲೆಡೆ ಹರಡಿತು. ಜನರು ತಂಡೋಪತಂಡವಾಗಿ ಬರತೊಡಗಿದರು. ಅನೇಕ ಅದ್ಭುತಗಳು ನಡೆದವು. ಅಘಟಿತ ಘಟನೆಗಳು ಶಿವಯೋಗಿಗಳ ತಪಸ್ಸಿನ ಪ್ರಭಾವದಿಂದ ಘಟಿಸಿದವು. ಸ್ವಾರ್ಥ ಲವಲೇಶವಿಲ್ಲದೆ ಲೋಕಹಿತಕ್ಕಾಗಿ ಕಾರ್ಯ ಎಸಗುವಲ್ಲಿ ಅದ್ಭುತಗಳು ನಡೆಯುತ್ತವೆ. ಅವು ಸ್ವಾಭಾವಿಕ, ಆದರೆ ಜನ ಅವನ್ನು ಪವಾಡವೆಂದು ಕರೆಯುತ್ತಾರೆ. ಶ್ರೀ ಸಿದ್ಧಗಂಗೆಯಲ್ಲಿ ನಡೆಯುತ್ತಿರುವ ಲೋಕಸೇವಾ ಮಣಿಹ ದಲ್ಲಿ ಇಂಥ ಪವಾಡಗಳಿಗೆ ಲೆಕ್ಕವಿಲ್ಲವೇನೋ! ಅಥಣಿಯ ಶಿವಯೋಗಿಗಳಿಗೆ ಬಸವಣ್ಣನವರಿಗೆ ಸಿದ್ಧಿಸಿದ್ದ ಪಂಚಪರುಷ ಶಕ್ತಿ ದೊರೆತಿತ್ತು. ಹೀಗಾಗಿ ಆರ್ತರ ಬವಣೆ ನೀಗಲು, ನೊಂದವರ ಕಣ್ಣೀರೊರೆಸಲು, ದಿಕ್ಕೆಟ್ಟವರಲ್ಲಿ ಆತ್ಮವಿಶ್ವಾಸ ಮೂಡಿಸಲು ಅವರ ಕೃಪಾದೃಷ್ಟಿಯಿಂದ ಸಾಧ್ಯವಾಗುತ್ತಿತ್ತು. ಹೀಗಾಗಿ ಅವರು ಪ್ರತ್ಯಕ್ಷ ದೇವರೆಂದೇ ನಂಬಿ ಜನ ನಡೆದು ಕೊಂಡರು. ಇವರ ಸಮಕಾಲೀನರಾದ ದಿವ್ಯಯೋಗಿ ಹುಬ್ಬಳ್ಳಿಯ ಸಿದ್ಧಾರೂಢರು ಬಂದ ಭಕ್ತರುಗೆ 'ಶಾಸ್ತ್ರ (ಪ್ರವಚನ) ಕೇಳೋದಿದ್ರೆ ಹುಬ್ಬಳ್ಳಿಗೆ ಬನ್ನಿ ಶಿವನನ್ನು ಕಾಣೋದಿದ್ರೆ ಅಥಣಿಗೆ ಹೋಗ್ರಿ' ಎನ್ನುತ್ತಿದ್ದರಂತೆ! ಶಿವಯೋಗಿಗಳು ತಮ್ಮ ಸರಳಜೀವನ, ಉದಾತ್ತ ಚಿಂತನದ ಪವಿತ್ರ ಜೀವನದಿಂದ, ಮಾನವ ಹಿತೈಷಿಯಾದ ನಡವಳಿಕೆ ಯಿಂದ ನಾಡಿನ ಒಳ-ಹೊರಗೆ ತುಂಬಾ ಜನಪ್ರಿಯರಾದರು. ಲೋಕಮಾನ್ಯ ತಿಲಕರು ಶಿವಯೋಗಿಗಳನ್ನು ಕಂಡು ಆಶೀರ್ವಾದ ಪಡೆದರು. ಸಿರಸಂಗಿ ಸಂಸ್ಥಾನದ ದೇಸಾಯಿ ಗಳಾಗಿದ್ದ ಲಿಂಗರಾಜರು ತಮ್ಮ ಸಮಸ್ತ ಸಂಪದವನ್ನು ಶಿವಯೋಗಿಗಳಿಗೆ ಅರ್ಪಿಸಲು ಬಂದಿದ್ದರು. ಶಿವಯೋಗಿಗಳ ಆದೇಶದ ಮೇರೆಗೆ ಸಮಾಜದ ಮಕ್ಕಳ ಶಿಕ್ಷಣಕ್ಕಾಗಿ ದೇಸ ಗತಿಯನ್ನು ಮೀಸಲಿಟ್ಟುದನ್ನು ನಾವು ಕಾಣುತ್ತೇವೆ.

ಊರು ಊರುಗಳಲ್ಲಿ ಪುರಾಣ ಪ್ರವಚನದ ಪರಂಪರೆ ಆರಂಭಿಸಿದ ಕೀರ್ತಿ ಶಿವಯೋಗಿಗಳದು. ಅದರಲ್ಲೂ ಬಸವ ಪುರಾಣದ ಪ್ರವಚನವಂತೂ ಪ್ರಸಿದ್ಧ. ಊರಲ್ಲಿ ವೈಮನಸ್ಸು, ಜಗಳ, ದೊಂಬಿ, ಕಚ್ಚಾಟ, ಅಶಾಂತಿ ಹೆಚ್ಚಿತು ಎಂದರೆ, ಜನರ ಮನಸ್ಸು ಕ್ಷೋಭೆಗೊಂಡು ನೆಮ್ಮದಿಯಿಲ್ಲವಾದಾಗ 'ಪುರಾಣ ಹಚ್ಚಿರಿ' ಅಥವಾ 'ಶಾಸ್ತ್ರ ಹಚ್ಚಿರಿ' ಎಂಬ ಮಾತು ರೂಢಿಯಾಯಿತು. ಆಧ್ಯತ್ಮ ಸಾಧಕರು, ಅನುಭಾವಿಗಳು ಶಿವಶರಣ ಕಥಾಕೋಶದಂತಿರುವ 'ಬಸವಪುರಾಣ'ವನ್ನು ರಾಗ ತಾಳಲಯ ಬದ್ಧವಾಗಿ ಹಾಡಿ ಅರ್ಥೈಸುತ್ತಿದ್ದರೆ ಸಹಸ್ರ ಸಂಖ್ಯೆಯಲ್ಲಿ ಜನ ನೆರೆದು ಕೇಳಿ ಕೃತಾರ್ಥರಾಗು ತ್ತಿದ್ದರು. ಮನರಂಜನೆಗೆ ಬೇರೆ ಅವಕಾಶಗಳಿಲ್ಲದಿದ್ದ ಆಗಿನ ಸನ್ನಿವೇಶದಲ್ಲಿ ಇವು ಸಾಂಸ್ಕೃತಿಕ ಕಾರ್ಯಕ್ರಮವಾಗಿ ಜನಪ್ರಿಯತೆ ಗಳಿಸಿದ್ದವು. ಆ ಪರಂಪರೆಯನ್ನು ಮುಂದು





ವರೆಸಿದವರು ಬಿಜಾಪುರದ ಜ್ಞಾನಯೋಗಾಶ್ರಮದ ವೇದಾಂತಿ ಕೇಸರಿ ಮಲ್ಲಿಕಾರ್ಜುನಶಿವಯೋಗಿಗಳು, ಆಧುನಿಕ ಋಷಿ ಸಿದ್ಧೇಶ್ವರಸ್ವಾಮಿಗಳು ಹಾಗೂ ಕೆಲವು ಮಠಮಾನ್ಯಗಳು.

ಅಥಣಿ ಶಿವಯೋಗಿಗಳ ಹಲವಂದದ ಲೋಕಕಾರಕ ಕಾರ್ಯಗಳಲ್ಲಿ ಮುಖ್ಯವಾದುದು ಪೂಜ್ಯ ಮೃತ್ಯುಂಜಯ ಸ್ವಾಮಿಗಳಂಥ ಯೋಗಿಗಳನ್ನು ರೂಪಿಸಿ ಸಮಾಜಕ್ಕೆ ನೀಡಿದ್ದು ಅವರ ಸಾಧನೆ ದೊಡ್ಡದು. 'ಕರ್ನಾಟಕ ಗಾಂಧಿ' ಹರ್ಡೇಕರ ಮಂಜಪ್ಪನವರೊಡಗೂಡಿ ದಾವಣಗೆರೆಯಲ್ಲಿ 'ಬಸವ ಜಯಂತಿ' ಆಚರಣೆಯನ್ನು ಆರಂಭಿಸಿ ಚಾರಿತ್ರಿಕ ಪುರುಷರಾದರು. ಧಾರವಾಡದಲ್ಲಿ ತಮ್ಮ ಗುರುಗಳ ಹೆಸರಿನಲ್ಲಿ ಒಂದು ಮಠವನ್ನು ಕಟ್ಟಿ, ಶಿವಯೋಗಿಗಳ ಪುತ್ಥಳಿ ಸ್ಥಾಪಿಸಿ, ನಿರಂತಜ ಜಾಗೃತಿಗೈವ ಕಾರ್ಯಕ್ರಮಗಳನ್ನು ನಡೆಸುವ, ಪುಸ್ತಕಗಳನ್ನು ಪ್ರಕಟಿಸುವ, ಜ್ಞಾನ ದಾಸೋಗಗೈವ ಮಹತ್ವದ ಕೆಲಸಗಳನ್ನು ಆವರು ಆರಂಭಿಸಿದರು.

ಅಥಣಿಯಪ್ಪಗಳು 'ಬೇಡಿದವರಿಗೆ ಬೇಡಿದ್ದನ್ನು ಕೊಡುವ ಪರಮಯೋಗಿ' ಎಂದೇ ಕೀರ್ತಿತರಾದವರು. ತಮ್ಮ ನಿಡಿದಾದ ಬದುಕಿನ ಪ್ರತಿಕ್ಷಣವನ್ನೂ ಲೋಕಕಲ್ಯಾಣಕ್ಕಾಗಿ ಮೀಸಲಿಟ್ಟವರು. ಅವರು ಲಿಂಗಾಂಗ ಸಾಮರಸ್ಯದ ಕಲೆಯನ್ನು ಅರಿತವರು. ಇಚ್ಛಾಮರಣಿಗಳು. ೨೩-೦೪-೧೯೨೧ರಂದು ಲಿಂಗಪೂಜೆ ಮಾಡಿ ಹಾಡು ಹಾಡುತ್ತಲೇ ಲಿಂಗದೊಳಗಾದರು. ಆದರೆ ಅವರ ದಿವ್ಯ ನೆನಪೇ ಶ್ರದ್ಧೆಯುಳ್ಳವರನ್ನು ಮುನ್ನಡೆಸಬಲ್ಲದು. ಕನ್ನಡನಾಡಿನ ಶಿವಯೋಗಿಗಳ ಪರಂಪರೆಯಲ್ಲಿ ಅವರು ಅಜರಾಮರ.



## ಆವಾವ ಕಾಯಕವ ಮಾಡಿದರು ಬಸವೇಶ

ಮಡಿವಾಳ ತಂದೆಗಳ ಬಟ್ಟೆಗಳ ನಾನೊಗೆವೆ
ಹಡಪದಪ್ಪಣ್ಣಗಳ ಕ್ಷೌರವನು ನಾಮಾಳ್ಪೆ
ಡೋರ ಕಕ್ಕಯ್ಯಂಗೆ ತೊಗಲ ಹದ ಮಾಡಿಡುವೆ
ವೀರ ಹರಳೇಶನಿಗೆ ಜೋಡನ್ನು ಮಾಡಿಡುವೆ
ಮಾರಯ್ಯ ತಂದೆಗಳ ಕಟ್ಟಿಗೆಯ ನಾ ಹೊರುವೆ
ಧೀರ ಕೇತಯ್ಯಗಳ ಬುಟ್ಟಿಯನು ನಾ ಮಾಳ್ಪೆ
ಅಮುಗಿ ಸಿದ್ಧೇಶ್ವರಗೆ ಕಂಬಳಿಯ ನಾ ನೆಯ್ವೆ
ನಮಿಸಿ ಮರಳೇಶನಿಗೆ ಪಾಕವನು ನಾ ಮಾಳ್ಪೆ
ಶಿವ ದಾಸಿಮಯ್ಯಗಳ ಬಟ್ಟೆಯನು ನಾ ನೆಯ್ವೆ
ತವೆ ಶಂಕರಯ್ಯಗಳ ಕಪನಿಯನು ನಾ ಹೊಲಿವೆ
ನುಲಿಯ ಚಂದಯ್ಯಗಳ ಹಗ್ಗ ಕಣ್ಣಿಯ ಮಾಳ್ಪೆ
ಸಲೆ ಮಾದರ ಚನ್ನನಿಗೆ ಅಂಬಲಿಯ ಮಾಡಿಡುವೆ
ಕುಂಬಾರ ಗುಂಡಯ್ಯಗೆ ಮಡಕೆಯನು ನಾ ಮಾಳ್ಪೆ
ಸಂಭ್ರಮದಿ ಪ್ರಭುವಿಂಗೆ ಮದ್ದಳೆಯ ಬಾರಿಸುವೆ
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

– ಅಥಣಿ ಶಿವಯೋಗಿಗಳು

## ಲಿಂಗ ಪೂಜೆಯ ಮಾಡಿರೊ

ಲಿಂಗಪೂಜೆಯ ಮಾಡಿರೊ ನಿಮ್ಮೊಳು ಪ್ರಾಣ
ಲಿಂಗಪೂಜೆಯ ಮಾಡಿರೋ ॥ ಪ ॥

ಗಂಗೆಯಮುನೆಗಳ ಸಂಗಮದೊಳು ಮಿಂದು
ಶೃಂಗಾಟಕದುಪರಿ ರಂಗಮಂಟಪದೊಳು ॥ ೧ ॥

ವರಭಕ್ತಿ ಜಲವನೀಡಿ ಮಜ್ಜನಗೈದು
ವಿರತಿ ಗಂಧವನೆ ತೀಡಿ
ಕರಣೇಂದ್ರಿಯಗಳೆಂಬ ಮಿರಗು ವಕ್ಷತೆಯನಿ
ಟ್ಟರಿವೆಂಬ ನಿರ್ಮಲ ಸರಸಪುಷ್ಪವ ಸೂಡಿ ॥ ೨ ॥

ಹರುಷವೆಂಬುವ ಧೂಪವ ಸಮರ್ಪಿಸಿ
ವರಬಿಂದು ರುಚಿದೀಪವ
ನಿರದೆತ್ತಿ ಪರಿಪೂರ್ಣ ನೈವೇದ್ಯವನೆ ಮಾಡಿ
ಮರೆವತ್ರಿಗುಣವೆಂಬ ವತ ತಾಂಬೂಲವಕೊಟ್ಟು ॥ ೩ ॥

ಕರದಿಷ್ಟಲಿಂಗವಿದೆ ಶರೀರದಲ್ಲಿ
ಪರವಸ್ತು ತಾನಾಗಿದೆ
ಹೊರಗೊಳಗೆರೆಡೆಂಬುದರಿದವನೆ ಮೀರಿ
ಗುರುಸಿದ್ಧನಂಘ್ರಿಯೊಳ್ ಬೆರೆದೇಕಮಯವಾಗಿ ॥ ೪ ॥

– ಸರ್ವಭೂಷಣ ಶಿವಯೋಗಿಗಳು

# ಜ್ಞಾನಜ್ಯೋತಿ ನಿಜಗುಣ ಶಿವಯೋಗಿ

– ಹಿ.ಗೂ. ಗುಂಡಪ್ಪ *

**ಭಾ**ರತಾಂಬೆಯ ನೆಲದಲ್ಲಿ ಹುಟ್ಟಿದ ಮಹಾ ಪುರುಷ ಶ್ರೀಕೃಷ್ಣ, ಬುದ್ಧ, ಬಾಹುಬಲಿ ಮುಂತಾದವರು ರಾಜವಂಶದಲ್ಲಿಯೇ ಹುಟ್ಟಿ ಭೂಮಂಡಲ ಆಳುವ ಶಕ್ತಿ ಸಾಮರ್ಥ್ಯವಿದ್ದರೂ, ಅದರ ಗೋಜಿಗೆ ಹೋಗದೆ ಜನತೆಯ ಉತ್ಥಾನಕ್ಕಾಗಿ ತಮ್ಮ ಜೀವಿತವನ್ನೇ ಮುಡುಪಾಗಿಟ್ಟರು. ಅಲ್ಲಮಪ್ರಭು, ಅಕ್ಕಮಹಾದೇವಿ, ಸರ್ವಜ್ಞ, ಕನಕ–ಪುರಂಧರ, ಹೆಳವನ ಕಟ್ಟೆ ಗಿರಿಯಮ್ಮ ಮುಂತಾದವರು ತಮ್ಮ ಐಹಿಕ ಸುಖ ಭೋಗಗಳನ್ನು ತ್ಯಾಗ ಮಾಡಿ, ಜೀವನ್ಮುಕ್ತಿಗಾಗಿ ಜನತೆಯ ಉದ್ಧಾರಕ್ಕಾಗಿ ಧರ್ಮ ಭೋದೆಗೈಯುತ್ತ ಕರುಣಾಮಯಿಗಳಾಗಿದ್ದಾರೆ.

ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು ವಂಶ ಪರಂಪರೆಯಾಗಿ ಬಂದ ರಾಜಾಧಿಕಾರವಿದ್ದರೂ ಪ್ರಜೆಗಳ ಶಾಶ್ವತ ಹಿತಕ್ಕಾಗಿ ತಮ್ಮ ಸುಖಭೋಗವನ್ನು ತ್ಯಾಗಮಾಡಿ ಕರ್ನಾಟಕ ರಾಜ್ಯಾದ್ಯಂತ ಸಂಚರಿಸಿ ತಮ್ಮ ಆತ್ಮೋದ್ಧಾರದೊಂದಿಗೆ ಸಕಲ ಜೀವಾತ್ಮಗಳ ಲೇಸನ್ನೇ ಬಯಸಿದ ನಿಸ್ಸೀಮ ಪುರುಷರಾಗಿದ್ದಾರೆ.

ಚಿಜ್ಯೋತಿ ಸ್ವರೂಪರಾದ, ಸಚ್ಚಿದಾನಂದ ರೂಪರಾದ ಇವರು 'ಶಂಭುಲಿಂಗ' ನಾಮ ವಿರಚಿತರಾಗಿ ಕಾವ್ಯಕ್ಕೆ ಕಾವ್ಯನಾಮವಾಗಿಸಿಕೊಂಡರು. ಮೈಸೂರು ಜಿಲ್ಲೆಯ ಕೊಳ್ಳೆಗಾಲ ಬೆಟ್ಟದ ಶಂಭುಲಿಂಗಸ್ವಾಮಿ ಇವರ ಗುರುಗಳಾಗಿ, ಆರಾಧ್ಯದೈವವಾಗಿ ಸ್ವೀಕರಿಸಿದ್ದರು. ಶಿವಾದ್ವೈತ ಪಂಥದವರಾಗಿದ್ದು, ಅದ್ವೈತ ವೇದಾಂತವನ್ನೊಳಗೊಂಡ ಸರಳ ಸುಂದರ ಆಧ್ಯಾತ್ಮ ಸಾಹಿತ್ಯ ಗ್ರಂಥಗಳಲ್ಲಿ ಶ್ರೇಷ್ಠ ಕೃತಿಗಳಾದ ಪರಮಾರ್ಥಗೀತೆ, ಪರಮಾನುಭವ ಬೋಧೆ, ಅನುಭಾವ ಸಾರ ಇವು ಇವರ ಅನುಭವ ವೇದಾಂತ ಕೃತಿಗಳು. ಅಲ್ಲದೆ ಸಂಸ್ಕೃತ ಭಾಷೆಯ ತತ್ವಶಾಸ್ತ್ರಗಳನ್ನು ಪಾಮರರಿಗೂ ಅರಿಯುವಂತೆ ಅಚ್ಚಕನ್ನಡದಲ್ಲಿ ಉಲ್ಲೇಖಿಸಿದ್ದಾರೆ. ಕೈವಲ್ಯ ಪದ್ಧತಿ ಮತ್ತು ವಿವೇಕ ಚಿಂತಾಮಣಿಯ ಗ್ರಂಥಗಳಲ್ಲಿ ಶೈವ ಧರ್ಮದ ಎಲ್ಲಾ ಮುಖಗಳ ತತ್ವ ತರ್ಕಗಳ ಸೂಕ್ಷ್ಮಾತಿ ಸೂಕ್ಷ್ಮಗಳನ್ನು ವಿಷದವಾಗಿ ವಿವರಿಸಿದ್ದಾರೆ.

ರಾಗ ಮಾಧುರ್ಯಗಳಿಂದ ಜನಪ್ರಿಯವಾದ ಕೈವಲ್ಯ ಪದ್ಧತಿಯ ಪಾರಮಾರ್ಥಿಕ ವಿಷಯಗಳನ್ನು ಭೋದಿಸುತ್ತದೆ. ಶಿವಕಾರುಣ್ಯ ಸ್ಥಳವು ಮೋಕ್ಷ ಸಾಧನೆಗೆ ದೈವ ಪ್ರೇರಣೆ ಹಾಗೂ ಗುರುಕೃಪೆಗಾಗಿ ಸ್ತುತಿಸಬೇಕೆಂದು ತಿಳಿಸುವುದು. ಜೀವ ಸಂಬೋಧನೆಯು ಪ್ರಪಂಚ ವಿದ್ಯೆ, ಶರೀರ ನೀರ ಮೇಲಿನ ಗುಳ್ಳೆಯಂತೆ ನಶ್ವರ, ಪ್ರಸೂತಿ, ಸ್ಮಶಾನ, ಪುರಾಣ ಎಂಬ ತಾತ್ಕಾಲಿಕ ವೈರಾಗ್ಯ ಬಿಟ್ಟು ಧೃಢ ಭಕ್ತಿ, ಕರ್ಮ, ಜ್ಞಾನ ಮಾರ್ಗದಿಂದ ಮುಮೂಕ್ಷುಗಳಾಗಬೇಕೆಂದು ಅವರ ಹಂಬಲ. ನೀತಿಕ್ರಿಯಾಚರ್ಯಸ್ಥಳದಲ್ಲಿ ಸಾಧಕರು ಕಾಯ, ವಾಚ, ಮನಸ್ಸು, ಶುದ್ಧರಾಗಿ ಹಿಗ್ಗದೆ, ಕುಗ್ಗದೆ ತನ್ನ ನಿಜ ಸ್ವರೂಪವನ್ನು ಅರಿಯಬೇಕು ಎಂದಿದೆ. ಯೋಗಪ್ರತಿಪಾದನ ಸ್ಥಳದಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳ ಮೂಲಕ ಸುಲಭವಾಗಿ ಶಿವಯೋಗದಿಂದ ಭೌತಿಕ ಜ್ಞಾನಕ್ಕೆ ಸಿಲುಕದ ಆತ್ಮಜ್ಞಾನವ ಗುರುಮುಖೇನ ಅರಿತು ನುರಿತು ಅನುಭವಿಸಿ, ಭವಸಾಗರದಿಂದ ಲೀಲಾಜಾಲವಾಗಿ ದಾಟಬಹುದು, ಮೋಕ್ಷಪಡೆಯಬಹುದು ಎಂದು ವೇದಾಂತ ವಿಷಯವನ್ನು ಬಹು ಮಾರ್ಮಿಕವಾಗಿ ತಿಳಿ ಹೇಳಿದ್ದಾರೆ.

ನಿಜಗುಣರ ಕೈವಲ್ಯ ಪದ್ಧತಿ ದೃಢ ಮನೋಭಾವ ಬಲದಿಂದ ಆತ್ಮಶಕ್ತಿ ನೀಡುವ ಘನಕೃತಿಯಾಗಿದೆ. ಭವಿಷ್ಯತ್ ಕಾಲಕ್ಕೆ ಮಾರ್ಗದರ್ಶಕರಾಗಿದ್ದಾರೆ. ಈ ಗ್ರಂಥದ ಮಾದರಿಯಲ್ಲಿ ಅನೇಕ ಗ್ರಂಥಗಳು ಹುಟ್ಟಿಕೊಂಡವು. ಸರ್ಪ ಭೂಷಣರ ಕೈವಲ್ಯ ಕಲ್ಪವಲ್ಲರಿ, ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯದರ್ಪಣ, ಘನಮಠಾರ್ಯರ, ಮುಪ್ಪಿನ ಷಡಕ್ಷರಿ, ಮೈಲಾರದ ಬಸವಲಿಂಗ ಶರಣರ ಹಾಗೂ ಶರೀಫರ ಹಾಡುಗಳಲ್ಲಿ ಹೆಚ್ಚು ಕಡಿಮೆ ನಿಜಗುಣರ ಹೋಲಿಕೆ ಕಾಣಬಹುದು. ಜನ ಕಲ್ಯಾಣಕ್ಕಾಗಿ ಆತ್ಮ ಚಿಂತನೆ ಗೈದ ಮೋಕ್ಷ ಸಾಧಕರಿಗೆ ಸರಳ ಮಾರ್ಗ ತೋರಿದ್ದಾರೆ.

ಮುಮುಕ್ಷುಗಳಿಗೆ ಆತ್ಮಜ್ಞಾನದ ಮೆಟ್ಟಿಲಿನಂತಿರುವ ಪಾರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ, ಅನುಭವ ಸಾರ, ಪರಮಾನುಭವ ಬೋಧೆಯಂತ ಕೃತಿಗಳು ಕೈವಲ್ಯ

* ಗೂಳಪ್ಪ ಕುಂಬಾರ, ಜೋಡುಸೇತುವೆ ಹತ್ತಿರ, ಶಿವಮೊಗ್ಗ ರಸ್ತೆ, ಹರಿಹರ–೫೭೭ ೬೦೧.





ಸೋಪಾನಗಳಾಗಿವೆ. ಅರವತ್ತು ಮೂರು ಶಿವಶರಣರ ತ್ರಿವಿಧ ಮತ್ತು ಮೇಲಿನವು ಈಗ ಉಪಲಬ್ಧವಿರುವ ಕೃತಿಗಳು.

ಅಲ್ಲದೆ ಆತ್ಮದರ್ಶನಸಾರ ಮತ್ತು ಆತ್ಮತರ್ಕ ಚಿಂತಾಮಣಿ ಎಂಬ ಸಂಸ್ಕೃತ ಗ್ರಂಥಗಳು ಇಂದು ನಮಗೆ ಉಪಲಬ್ಧವಾಗದೆ ಸಾಹಿತ್ಯ ಮತ್ತು ಜನತೆಗೆ ತುಂಬ ನಷ್ಟವಾಗಿದೆ.

ಷಟ್‌ಶಾಸ್ತ್ರ ಕೃತಿಗಳೆಂದು ಆಧ್ಯಾತ್ಮಲೋಕಕ್ಕೆ ಅಮೂಲ್ಯ ಕೀರ್ತಿ ತಂದುಕೊಟ್ಟ ಕನ್ನಡದ ನಿಜಗುಣರು. ಕರ್ನಾಟಕ ಸಾಹಿತ್ಯದ ನಿಜಗುಣರು ಹೌದು. ಹಾಡುಗಬ್ಬ ವಾಗಿ ಸಹ ಪಾಮರರು ಸಹ ಸರಳವಾಗಿ ಅರಿಯುವಂತೆ ಸುಂದರವಾಗಿ ಸೊಗಸಾಗಿ ಹಾಡುವಂತೆ ಅನುಕೂಲವಾಗು ವಂತೆ ವಾರ್ಧಕ, ಪರಿವರ್ಧಿನೀ ಮುಂತಾದ ವಿವಿಧ ಛಂದೋರೂಪಗಳಲ್ಲಿ ರಚಿಸಿ ಸಾಹಿತ್ಯ, ಸಂಗೀತ ಸುಧೆ ಯನ್ನು ನೀಡಿದ್ದಾರೆ.

ಚೈತ್ರದ ಚೈತನ್ಯ ಚಿಲುಮೆಯ ಆಧ್ಯಾತ್ಮ ಎಂಬ ಯುಗಾದಿ ಹಬ್ಬದ ಹಾಡು ಹಬ್ಬಗಳ ಹಾಡುವ ಕನ್ನಡ ಕಾಜಾಣ ಕೋಗಿಲೆಯಾಗಿ ಜನರ ಮಾಮರ ಹೃದಯದಲ್ಲಿ ಹಾಡುತ್ತಲೇ ಇದ್ದಾರೆ. ಸಂಸಾರಿಕರಾಗಿ, ಯೋಗಿಯಾಗಿ, ತಪಸ್ವಿಯಾಗಿ, ಪ್ರೌಢಪಾಂಡಿತ್ಯ ಪಡೆದು, ಸೌಜನ್ಯ, ಔದಾರ್ಯ, ವೈರಾಗ್ಯ, ಅನನ್ಯ ಭಯ ಭಕ್ತಿ ಶ್ರದ್ಧೆಯಿಂದ ಕೂಡಿದೆ. ಸಾಹಿತಿಯಾಗಿ ಕನ್ನಡದ ಕುಮಾರ ಪತಂಜಲಿ ಮುನಿಗಳಾಗಿ, ವಿಶ್ವಕೋಶಗಳ ಹರಿಕಾರರಾಗಿ ಹಾಡು ಹಬ್ಬಗಳ ಪುನಃಸ್ಥಾಪಕರಾಗಿ, ವೇದಾಂತ ಗ್ರಂಥಗಳ ಬೆಳವಣಿಗೆಗೆ ನಾಂದಿ ಹಾಡಿದ ಶ್ರೀಮನ್ನಿಜಗುಣರ ಕೊಡುಗೆ ಅಪಾರವಾದುದು. ವೇದ, ಉಪನಿಷತ್ತು, ಸ್ಮೃತಿ, ಇತಿಹಾಸ, ಶಾಸ್ತ್ರ, ಪುರಾಣ, ಕರ್ನಾಟಕ ಸಂಗೀತ, ತರ್ಕ, ಜ್ಯೋತಿಷ್ಯ, ವ್ಯಾಕರಣ, ಯೋಗಸಿದ್ಧಿಗಳನ್ನು ಕರಗತ ಮಾಡಿಕೊಂಡು, ಲೋಕಕ್ಕೆ ತಮ್ಮ ತಪಸ್ಸಿನ ಶಕ್ತಿಯನ್ನು ಧಾರೆ ಎರೆದಿದ್ದಾರೆ. ವಿದ್ಯಾಸರಸ್ವತಿಯಾಗಿ, ಜ್ಞಾನಗಂಗೆಯಾಗಿ ಬಾಡದ ಬುಗ್ಗೆ ಯಾಗಿ, ಅಂಗೈಯೊಳಗಣ ನೆಲ್ಲಿಕಾಯಿಯಂತೆ ಶೋಭಿಸಿದ್ದಾರೆ. ಇವರ ಅಪ್ರತಿಮ ಪಾಂಡಿತ್ಯ ಆತ್ಮಶಕ್ತಿ, ಬಹು ವ್ಯಕ್ತಿತ್ವ ಉಳ್ಳವರು ದೇಶದಲ್ಲೇ ಬಹು ವಿರಳ. ರಾಗ, ತಾಳ, ಲಯದಿಂದ ಕೂಡಿದ ಇವರ ಕವಿತ್ವ ಕರ್ನಾಟಕ ಸಂಗೀತಕ್ಕೆ ಕಳಸ ಇಟ್ಟಂತಿದೆ. ಹಾಡು ಹಬ್ಬವಾಗಿ ಜನಪದ ವಾಗಿ ಜನಮನದಲ್ಲಿ ಅಚ್ಚುಮೆಚ್ಚಾಗಿ ಹೃದಯಾಂತರಾಳ ದಲ್ಲಿ ಉಳಿದುಕೊಂಡಿದೆ.

ವಿಶ್ವಕೋಶದಂತಿರುವ ಅಮೂಲ್ಯವಾದ ಇವರ ವಿವೇಕ ಚಿಂತಾಮಣಿ ಗ್ರಂಥವು ಜನಪ್ರಿಯವಾಗಿ ತೆಲುಗು, ತಮಿಳು, ಸಂಸ್ಕೃತ ಮತ್ತು ಮರಾಠಿಗಳಲ್ಲಿ ಅನುವಾದಿತವಾಗಿವೆ. ಅಧಿಕ ವಿದ್ಯಾಸಂಪನ್ನ, ಸುಜ್ಞಾನಚಕ್ರವರ್ತಿ ಅನುಪಮಾನಂ, ದಾಬ್ಧಿ ಇತ್ಯಾದಿ ಬಿರುದುಗಳಿಂದ ಕೂಡಿದ್ದಾರೆ.

ಸುಸಂಸ್ಕೃತ ನವ ನಾಗರಿಕ ಎನಿಸಿಕೊಂಡ ಇಂದಿನ ವಿಶ್ವದ ಪ್ರತಿಯೊಬ್ಬ ಮಾನವ ಒಂದಿಲ್ಲೊಂದು ರೀತಿಯಲ್ಲಿ ತಮಗರಿವಿಲ್ಲಿದೆಯೆ ಅನಾಗರೀಕನಾಗುತ್ತಿದ್ದಾನೆ. ಇಂದಿನ ಪದವಿ ಪಡೆದು ವಿದ್ಯಾವಂತನೆನಿಸಿಕೊಳ್ಳುವುದಕ್ಕೆ ಬದಲು ಮಾನವ ಸಂಸ್ಕೃತಿಯನ್ನು ಕಲಿಸುವ ನಿಜಗುಣರ ಕೃತಿಗಳ ಪಾಠ್ಯ ಪುಸ್ತಕಗಳಿಂದ ನಿಜಜ್ಞಾನ ಪದವಿ ಪಡೆದರೆ, ಮನುಕುಲಕ್ಕೆ ಮೋಕ್ಷ ಪದವಿ ಸಿಕ್ಕಂತೆ. ಅವರ ಕನಸು ನನಸಾಗುವುದು ಎಲ್ಲರ ಹೃದಯದಲ್ಲಿ ಅವರೆ ಹೇಳಿದಂತೆ 'ಜ್ಯೋತಿ ಬೆಳಗುತಿದೆ, ವಿಮಲ ಪರಂಜ್ಯೋತಿ ಬೆಳಗುತಿದೆ' ಎಂಬುದರಲ್ಲಿ ಸಂಶಯವಿಲ್ಲ.

ಕ್ರಿ.ಶ. ಸುಮಾರು ೧೫೦೦ರಲ್ಲಿ ಇದ್ದರೆಂದು ಸದ್ಯಕ್ಕೆ ಹೇಳಬಹುದಾದ ನಿಜಗುಣಶಿವಯೋಗಿಗಳು, ಕರ್ನಾಟಕದ ಕೊಳ್ಳೇಗಾಲ ತಾಲ್ಲೂಕಿನ ಶಂಭುಲಿಂಗನ ಬೆಟ್ಟ ಇವರ ತಪಸ್ಸಿನ ತಾಣವಾಗಿದೆ. ಪಕ್ಕದ ಚಿಲಕವಾಡಿ ಗ್ರಾಮದ ಸುತ್ತಣ ಸೀಮೆಗೆ ಜನಾನುರಾಗಿ ರಾಜರಾಗಿದ್ದರು. ಒಮ್ಮೆ ತಮ್ಮ ಅರಮನೆಯಲ್ಲಿ ಕ್ಷೌರಕ್ಕೆ ಕುಳಿತಾಗ ಅವರ ಧರ್ಮಪತ್ನಿ ಜಂಗಮರಿಗೆ ತಂಗಳನ್ನ ನೀಡಿದರೆಂಬ ಕಾರಣಕ್ಕೆ ರಾಜ್ಯ, ಸತಿ, ಸುತರನ್ನು ಆ ಕ್ಷಣದಲ್ಲೇ ತ್ಯಾಗಮಾಡಿ ಯೋಗಿಯನ್ನರಸಿಕೊಂಡು ಹೋಗಿ, ನಿಜವಾದ ಗುಣಗಳ ಶಿವಯೋಗಿಯಾದರು. ಇವರ ಚರಿತ್ರೆಗೆ ಇನ್ನೂ ಹೆಚ್ಚು ಬೆಳಕು ಚಲ್ಲುವಂತೆ ಸಂಶೋಧಿಸಿ, ರಾಜ್ಯ ಸರ್ಕಾರವು ರಾಜ್ಯಸ್ಮಾರಕಗಳಾಗಿ ಪರಿವರ್ತಿಸಿ ಉಳಿಸಬೇಕಾಗಿದೆ.

---

ಆನೊಬ್ಬನು, ಸುಡುವರೈವರು; ಮೇಲೆ ಸಿಚ್ಚು
ಘನ; ನಿಲಲುಬಾರದು;
ಕಾಡ ಬಸವನ ಹುಲಿ ಕೊಂಡೊಯ್ದರೆ
ಆರಯ್ಯಲಾಗದೆ, ಕೂಡಲಸಂಗಮದೇವಾ?
ಮೇಲಾಗಲೊಲ್ಲೆನು ಸೀಳಾಗಲೊಲ್ಲದೆ;
ಸೀಳಿಂಗಲ್ಲದೆ ಹಯನ ಕರೆವುದೇ?
ಮೇಲಾಗಿ ನರಕದೊಳೋಲಾಡಲಾರೆನು ;
ಮಹಾದಾನಿ, ಕೂಡಲಸಂಗಮದೇವಾ.

– ಬಸವಣ್ಣ

# ಐಶ್ವರ್ಯ ಗಳಿಸು ಔದಾರ್ಯ ಬೆಳಸು

- ತದ್ದಲಸೆ ವಿಘ್ನೇಶ್ವರ ಶರ್ಮ *

ನಮ್ಮ ಬದುಕಿನ ವ್ಯವಸ್ಥೆಯಲ್ಲಿ ದಿನವೂ ಹೊಸ ಹೊಸ ಬಯಕೆ-ಬೇಕುಗಳು ಹುಟ್ಟುತ್ತಲೇ ಇರುತ್ತವೆ. ಅದಕ್ಕೆ ಮುಕ್ತಾಯವೆಂಬುದೇ ಇರುವುದಿಲ್ಲ. ವಸ್ತು-ವಾಹನ-ವಸ್ತ್ರ - ಅಲಂಕಾರ ಮುಂತಾದುವುಗಳೆಲ್ಲ ನವನವೀನ ರೂಪ ತಾಳುತ್ತ ಆಕರ್ಷಕವಾಗಿ ದಿನವೂ ಮನಸ್ಸನ್ನು ಸೆಳೆಯುತ್ತಿರುವುದಾಗಿದೆ. ಅವು ಇಲ್ಲವೆಂದರೆ ಬದುಕಿನಲ್ಲಿ ಯಾವುದೋ ಕೊರತೆ ಎನ್ನಿಸುತ್ತದೆ. ಅದನ್ನು ಪಡೆಯುವುದಕ್ಕೂ ಮನಸ್ಸು ಹಂಬಲಿಸುತ್ತದೆ. ಅದು ದೊರೆತಾಗ ಸಮಾಧಾನ. ಆದರೆ ಅದು ಅಷ್ಟಕ್ಕೇ ನಿಲ್ಲುವುದಿಲ್ಲ. ಹೊಸತೂ ಬರುತ್ತದೆ. ಹೊಸ ಬಯಕೆಯೂ ಚಿಗುರುತ್ತದೆ. ಮುಕ್ತಾಯವೆಂಬುದೇ ಇರುವುದಿಲ್ಲ.

ನಮ್ಮ ಈ ಸಂಗ್ರಹ ಪ್ರವೃತ್ತಿಯು ಆಳತೆಗೆಟ್ಟು ಬೆಳೆಯಬಾರದು. ಬಾಯಿ ಚಪಲಕ್ಕೆ ತಿನ್ನುತ್ತ ಹೋದರೆ ಆರೋಗ್ಯ ಬೇಗ ಹಾಳಾಗುತ್ತದೆ. ಸ್ವಾಸ್ಥ್ಯಕ್ಕೆ ಎಷ್ಟು ಅಗತ್ಯವೋ ಅಷ್ಟನ್ನೇ ಬಳಸುವುದು ವಿಹಿತ. ಹಾಗೇ ನಮಗೆ ಅದು ಬೇಕು, ಇದು ಬೇಕು ಅಂದರೆ ಅದಕ್ಕೆಲ್ಲ ಆರ್ಥಿಕ ಸಂಪನ್ಮೂಲವೂ ಇರಬೇಕಾಗುತ್ತದೆ. ಪ್ರಾಮಾಣಿಕ ನಿರಂತರ ಗಳಿಕೆಯೂ ಇರಬೇಕಾದದ್ದು ಅವಶ್ಯ. ಇಲ್ಲಿ ಈ ಗಳಿಕೆಯೆಂಬುದು ಕೇವಲ ನಮಗಾಗಿ ಅಷ್ಟೇ ಆದರೆ ನಾವು ಏನು ಸಾಧಿಸಿದಂತಾಗುತ್ತದೆ?

ಬದುಕೆಂಬ ನಾಣ್ಯಕ್ಕೆ ಐಶ್ವರ್ಯ-ಔದಾರ್ಯಗಳು ಎರಡು ಮಗ್ಗಲು ಇದ್ದ ಹಾಗೆ. ಐಶ್ವರ್ಯದ ಮುಖ ಒಂದನ್ನೇ ನೋಡಿ ಅದಕ್ಕೆ ಬೆಲೆ ಕಟ್ಟಲಾಗದು, ಔದಾರ್ಯವು ಸೇರಿದರೆ-ಸಮರ್ಪಕವಾಗಿದ್ದರೆ ಮಾತ್ರ ಅದಕ್ಕೆ ಹೆಚ್ಚಿನ ಮಹತ್ವ ಬರುತ್ತದೆ. ಸರೋವರದಲ್ಲಿ ನೀರು ತುಂಬಿ ತುಳುಕುತ್ತಿದ್ದರೆ ಎಂದಾದರೂ ಒಂದು ದಿನ ಅದರ ಕಟ್ಟೆ ಒಡೆದು ಹೋಗುವ ಸಂಭವ. ಐಶ್ವರ್ಯವೂ ಹಾಗೆ! ಅದು ಅಪರಿಮಿತವಾಗಿ ಸಂಗ್ರಹವಾದರೆ ಅದೂ ಗಂಡಾಂತರ ಕಾರಿಯೇ ಆದೀತು.

ನಾವು ಐಶ್ವರ್ಯ ಸಂಪಾದಿಸುವಾಗ ಅನೇಕರ ಸಹಕಾರ, ಸಹಾನುಭೂತಿ ಎಲ್ಲ ಸೇರುತ್ತದೆ. ಅದು ಸಮಾಜ ಸೊತ್ತು. ಇದು ಧರ್ಮ ಸೂಕ್ಷ್ಮದ ಸಂಗತಿ. ಅನ್ಯರ ಬೆಂಬಲ ಇಲ್ಲದಿದ್ದರೆ ಅದು ಸಾಧಿತವಾಗುತ್ತಿರಲಿಲ್ಲ. ನಾವೂ ಸಮಾಜದ ಒಂದು ಅಂಗ. ನಾವು ಎಲ್ಲರಿಗಾಗಿ, ಎಲ್ಲರೂ ನಮಗಾಗಿ. ಈ ತತ್ತ್ವ ಆದರ್ಶಗಳನ್ನು ಮರೆಯಕೂಡದು, ಹಾಗೊಮ್ಮೆ ಮರೆತರೆ ಕೃತಘ್ನರಾಗುತ್ತೇವೆ. ಆಗ ಸಮಾಜದ ಋಣ ನಮ್ಮಲ್ಲಿ ಹೆಚ್ಚಿಗೇ ಬೆಳೆಯುತ್ತದೆ. ಕಾಲಕಾಲಕ್ಕೆ ಅದನ್ನು ತೀರಿಸುವುದಕ್ಕೆ ಮುಂದಾಗಬೇಕು. ಸಮಾಜದ ಲೋಕದ ಅವಶ್ಯಕತೆ ತಿಳಿದು ಔದಾರ್ಯ-ತ್ಯಾಗದಿಂದ ಸಹಕರಿಸಿದರೆ ಸಾಮಾಜಿಕ ಶಕ್ತಿ-ಸುಧಾರಣೆ ಬಲಗೊಳ್ಳುತ್ತದೆ. ಕೇವಲ ಐಶ್ವರ್ಯ ಕೂಡಿ ಕೂಡಿ ಹಾಕುವುದರಿಂದ ಏನು ಪ್ರಯೋಜನ? ಸಂಪತ್ತಿಗೆ ಸದ್ವಿನಿಯೋಗ ಕೂಡಬೇಕು. ಗಳಿಸುವಾಗ ಅದು ನಮ್ಮದು ಎಂಬ ಭಾವನೆಯಿರಲಿ, ನಂತರ ಅದರ ವಿನಿಯೋಗ- ರಕ್ಷಣೆಯಲ್ಲಿ ನಾವು ಧರ್ಮದರ್ಶಿಗಳ ಹಾಗೆ ವರ್ತಿಸಬೇಕೆಂಬುದು ಗಾಂಧೀಜಿಯವರ ಅಭಿಪ್ರಾಯ. ಸಮಾಜದಿಂದಲೇ ಶೇಖರಣೆಯಾದ ಸ್ವೊತ್ತು ನಮ್ಮ ಅವಶ್ಯಕತೆ ಮೀರಿ ಅದನ್ನು ಬಳಸಕೂಡದು. ಪುನಃ ಅದು ಸಮಾಜಕ್ಕೆ ಲಭ್ಯವಾಗಬೇಕು, ಪೃಥ್ವಿಯಲ್ಲಿರುವ ನೀರು ಆವಿಯಾಗಿ ಮೋಡಕ್ಕೆ ಸೇರಿಕೊಳ್ಳುತ್ತದೆ. ಅದು ಮೋಡದಲ್ಲಿಯೇ ಉಳಿದುಕೊಂಡರೆ ಜಗತ್ತಿನ ವ್ಯವಹಾರ ಸುಗಮವಾಗುವುದಿಲ್ಲ. ಅಂತೆಯೇ ಐಶ್ವರ್ಯವೂ ಸಹ ವ್ಯಕ್ತಿ ಸಮಾಜದ ಮಧ್ಯೆ ಅಭಿವೃದ್ಧಿಯ ಮಾಧ್ಯಮವೆನ್ನಿಸಬೇಕು.

ಪ್ರಾಮಾಣಿಕ ರೀತಿಯಲ್ಲಿ ದುಡಿಯುವುದು ಅದರಲ್ಲಿ ಸಾಧ್ಯವಿದ್ದಷ್ಟು ನೀಡಿ ಉಳಿದದ್ದರಲ್ಲಿ ಅವಶ್ಯಕತೆ ಪೂರೈಸಿ ಉಣ್ಣುವುದು ಶ್ರೇಷ್ಠ ಧರ್ಮವಾಗಿದೆ. 'ಭೂತ್ಯೈ ನ ಪ್ರಮದಿತವ್ಯಂ, ಕುಶಲಾನ್ನ ಪ್ರಮದಿತವ್ಯಂ' ಎಂಬುದಾಗಿ ಕುಶಲಾನ್ನ ಪ್ರಮದಿತವ್ಯಂ' ಎಂಬುದಾಗಿ ಉಪನಿಷತ್ತು ಆದೇಶಿಸುತ್ತದೆ. ಸಂಪತ್ತು ಗಳಿಸುವಲ್ಲಿ ಪ್ರಮಾದ ಹೊಂದಬೇಡ, ಧರ್ಮಬದ್ಧ ಸುಖ-ಸಂತೋಷಗಳಿಂದ ವಂಚಿತನಾಗಬೇಡ ಎಂದು ಹೇಳಿದ ಶಾಸ್ತ್ರಗಳೇ ಜನಜೀವನಕ್ಕೆ ತೊಂದರೆಯಾಗದ ಹಾಗೆ ಸಂಗ್ರಹಿಸಿ ಇಡಬೇಡ ಅಂತಲೂ ತಿಳಿಸಿದೆ. ಅಂದರೆ ನಮ್ಮ ಐಶ್ವರ್ಯವೂ ಇನ್ನೊಬ್ಬರ ಕಷ್ಟ ನೀಗಿಸುವಲ್ಲಿ ಅದರ ಸಾರ್ಥಕತೆಯಾದಂತೆ. ಸಂಪತ್ತು ವಿಕೇಂದ್ರಿಕರಣವಾಗಬೇಕು. ಅದು ಒಂದೆಡೆ ಕುಳಿತರೆ ಯಾವ ಪುರುಷಾರ್ಥ ತರುತ್ತದೆ? ಹಣಕಾಸಿನ ಸಂಸ್ಥೆಗಳು ಅದನ್ನು ಪಡೆಯುವದಷ್ಟನ್ನೇ ಮಾಡುತ್ತಿಲ್ಲ. ರಕ್ಷಣೆಯ ಜೊತೆಗೆ ಅಗತ್ಯವುಳ್ಳವರಿಗೆ ಸಾಲದ ರೂಪದಲ್ಲಿ ಬೇರೆ ಬೇರೆ ಉದ್ಯೋಗ-ಉತ್ಪಾದನೆ ಹೆಚ್ಚಿಸಲೂ ಸಹಕರಿಸುತ್ತವೆ. ಕೂಡಿಸುವುದು-ಕೂಡಿದ್ದನ್ನು ನಿಯಮ ಬದ್ಧವಾಗಿ ವಿತರಿಸುವುದು ಅಂದರೆ ಐಶ್ವರ್ಯ-ಔದಾರ್ಯಗಳ ಮಧುರ ಬಾಂಧವ್ಯದಿಂದಲೇ ಅಭಿವೃದ್ಧಿ ಸಿದ್ಧಿಸುವುದು. ಈ ಔದಾರ್ಯದ ಮೂಲಕ ಅನುಪಮ ಆನಂದವೂ ಲಭ್ಯ ಈ ಕಾರಣಕ್ಕಾಗಿಯೇ.

'ತ್ಯಾಗೇನೈಕೇ ಅಮೃತತ್ವ ಮಾನಶುಃ' ಎಂದು ಉಪನಿಷತ್ತು ಹೇಳುತ್ತದೆ.

* ಹುಣಸೇಕೊಪ್ಪ ಅಂಚೆ, ಶಿರಸಿ.





# ವಿಶಾಲಭಾವದ ಆದರ್ಶ ವಿಚಾರಾನುಭವಿ

- ದೊಡ್ಡಬಾಣಗೆರೆ ಪ್ರಕಾಶಮೂರ್ತಿ *

ಕರ್ನಾಟಕವು ಒಂದು ಅಪೂರ್ವ ಆದರ್ಶ ಭೂಮಿ. ಕಲೆ, ಸಾಹಿತ್ಯ, ಸಂಸ್ಕೃತಿಗಳ ಸಂಗಮ. ಸತ್ಯ ನ್ಯಾಯ ಧರ್ಮಗಳ ವಿಚಾರ ತಪೋಭೂಮಿ. ಶಕ್ತಿ ಶೌರ್ಯಸಾಹಸಿಗಳ ವೀರ ಭೂಮಿ. ಹಾಸುಹೊಕ್ಕಾದ ಸಂಪತ್ತಿನ ಆಗರ. ನದಿ ಗಿರಿವನಗಳ ದೈವದತ್ತ ಪ್ರಕೃತಿಯ ವಿಶಾಲನಾಡು. ವಿವಿಧ ರಂಗಗಳಲ್ಲೂ ಅತೀವ ಹೆಸರಾದುದು. ಜನಪ್ರೇಮ ಜನ ವಿಶ್ವಾಸದ ಪ್ರಜಾಪಾಲನೆಯಲ್ಲಿ ವಿವಿಧ ಆಳ್ವಿಕೆಗಳ ರಾಜಮಹಾರಾಜರುಗಳು ಆಳಿ ಹೋದ ಭೂಮಿ, ಸಾಮಾಜಿಕ ಕ್ರಾಂತಿಪುರುಷರು ಕೂಡ ಇಲ್ಲಿ ಬಹುಮಂದಿ. ಅಪ್ರತಿಮ ಸಾಹಸಿಗಳ ತವರುಭೂಮಿ. ಹೆಣ್ಣು-ಗಂಡು ಗಳಿಬ್ಬರೂ ತಮ್ಮದೇ ಆದ ನೇರ ವಿಚಾರನೀತಿಯಲ್ಲಿ ತೊಡಗಿ ನಾಡಿನ ಕೀರ್ತಿಯನ್ನು ಬೆಳಗಿಸಿದ್ದಾರೆ. ಕನ್ನಡ ಚರಿತ್ರೆಯ ಇತಿಹಾಸ ಪುಟಗಳೇ ಸುವರ್ಣಮಯ. ಅದರಲ್ಲೂ ೧೨ನೇ ಶತಮಾನದ ಶಿವಶರಣರದೂ ಒಂದು ಕೀರ್ತಿಕಾಲ. ಅಷ್ಟೇ ಕ್ರಾಂತಿಕಾರಕ ಚಟುವಟಿಕೆಗಳನ್ನು ಶಿವಶರಣರು ತಮ್ಮ ಬದುಕಿನ ಹಾದಿಯಲ್ಲಿ ನಡೆದು ತೋರಿ ಮುನ್ನಡೆದಿದ್ದಾರೆ. ಶರಣರ ಬಳಗದ ಹಿರಿಯಾಳುವೇ ಕ್ರಾಂತಿಕಾರಿ ಬಸವೇಶ್ವರರು. ಕಾಯಕ ನಿಷ್ಠ, ಜಾಗೃತ ಧರ್ಮಶೀಲ, ತಿಳಿವಿನ ಆದರ್ಶ ಭಂಡಾರಿ, ನೀತಿ ವೈಶಾಲ್ಯತೆಯ ವಿಚಾರ ಮನೋಭಾವಿ, ತತ್ತ್ವನಿಷ್ಠ ಶರಣ ಪ್ರವರ್ತಕ, ಕಾಯಕವೇ ಕೈಲಾಸವೆಂಬುದನ್ನು ಜಗತ್ತಿಗೇ ತೋರಿಹೋದ ವಿಚಾರಾನುಭವಿ. ಬಹುಮುಖ ಕೀರ್ತಿಗೆ ಪಾತ್ರರಾದ ಶರಣ ಶ್ರೇಷ್ಠ.

ಅಪಾರ ವೈಭವ ಮೈವೆತ್ತ ಅಚ್ಚುಮೆಚ್ಚಿನ ಕೀರ್ತಿ ಕನ್ನಡ ಸಾಹಿತ್ಯಕ್ಕೆ ಆದಿಯಿಂದಲೂ ಇದೆ. ಸಾಹಿತ್ಯಕ್ಕೆ ಆಗ ಅಪಾರ ಪೋಷಕರಿದ್ದರು. ರಾಜಾಶ್ರಯಗಳ ನೆರವಿತ್ತು. ಕಾವ್ಯ ಪ್ರಾಕಾರಕ್ಕೂ ಅಪೂರ್ವ ಬೆಂಬಲವಿತ್ತು. ಶೈಲಿಯ ಪ್ರೌಢಿಮೆಯನ್ನು ಬಲ್ಲ ಪಂಡಿತರ ರಚನೆಗಳಿಗೂ ಅವಕಾಶಗಳಿದ್ದವು. ೧೨ನೆಯ ಶತಮಾನದಲ್ಲಿ ವಚನ ಸಾಹಿತ್ಯ ಬೆಳಕಾಯಿತು. ಈ ಪ್ರಾಕಾರ ಬೆಳಕಾದುದು ಶಿವಶರಣರಿಂದಲೇ ಹೌದು. ಕರ್ತವ್ಯ ಪ್ರೌಢಿಮೆ, ವ್ಯಾಕರಣಾನುಭವ ಕಾವ್ಯ ಚಾತುರ್ಯತೆ ಗಳ ಹಾದಿ ಕೊಂಚ ಬದಲಾಯಿತು. ವಿಚಾರಶೈಲಿ ಬದುಕಿಗೆ ಅತೀವ ಸಮೀಪವಾಯಿತು. ಅಷ್ಟೇ ಸರಳ, ಸುಂದರವೆನಿಸಿತು ನಿತ್ಯಜೀವನದ ಸತ್ಯ ಅನುಭವಗಳಲ್ಲಿ ಕಂಡ ವಾಸ್ತವ ಚಿತ್ರಣಗಳು ಈ ಸಾಹಿತ್ಯದಲ್ಲಿ ಬೆಳಕಾದವು. ಈ ಸಮಗ್ರ ವಚನ ಸಾಹಿತ್ಯದ ಕರ್ತೃಗಳು ಶಿವಶರಣರೇ ಹೌದು. ಈ ವಚನಗಳನ್ನು ಬಿಡಿಬಿಡಿಸಿ ಗ್ರಹಿಸಿ ನಡೆದಂತೆಲ್ಲಾ ವಿಚಾರದ ಅರಿವು ದೊರಕುತ್ತದೆ. ಭಕ್ತಿ ಜ್ಞಾನ ದೈವವೆಂಬ ಸುದ್ಧಿ ಮಾತ್ರವೇ ಅಲ್ಲ; ಬಾಳ್ವೆಯ ಸ್ನೇಹ ವಿಶ್ವಾಸಗಳ ನಡೆವ ಹೆಜ್ಜೆಯ ನೀತಿ ನಿಮಯಗಳ ಮತ್ತು ಬದುಕಿನ ಗುರುಗುಟ್ಟುಗಳ ಚೆಲುವು ಬೆಳಕಾಗುತ್ತದೆ. ಮಾನವನ ಹೃದಯದಲ್ಲಿ ಅಡಗಿರುವ ಅಪಾರ ಜ್ಞಾನಭಂಡಾರದ ನಲಿವು ಮನಸಾಗುತ್ತದೆ.

'ಎಲ್ಲರವನು ಇವ ನಮ್ಮಣ್ಣ ಎಲ್ಲರಾತ್ಮಗಳ ಹಿರಿಯಣ್ಣ' ಎಂಬ ಕೀರ್ತಿ ಬಸವಣ್ಣನವರದು. ಇವರ ಹೆಸರು ನಾಡ ಜನದ ಮನೆ-ಮನಗಳಲ್ಲಿ ಮಾತ್ರವಲ್ಲ. ಹೊರನಾಡ ಜನ ಮನೆಗಳಲ್ಲೂ ನೆಲೆಹಾಸಿ ನಲಿಯುತ್ತಿದೆ. ತತ್ವವೇತ್ತ ಮಹಾದರ್ಶ ಶರಣರ ಸಾಲಿನಲ್ಲಿ ಬಸವೇಶ್ವರರ ಹೆಸರು ಅತೀವ ಪ್ರಜ್ವಲ. ರಾಷ್ಟ್ರಮಟ್ಟದಲ್ಲಿಯೂ ತುಂಬಾ ಜನ ಮನ್ನಣೆಯಿದೆ. ತಾತ್ವಿಕತೆಯನ್ನು ಹೊತ್ತ ವಿಚಾರಶೀಲ ನಡ ವಳಿಕೆ ಬಹುಮುಖ ವಿಶ್ವಾಸಕ್ಕೆ ಪಾತ್ರವಾಗಿದೆ.

ಬಸವಣ್ಣನವರು ಮಾದರಸ-ಮಾದಲಾಂಬಿಕೆ ದಂಪತಿಗಳ ಉದರದಲ್ಲಿ ಬಾಗೇವಾಡಿಯಲ್ಲೇ ಜನಿಸಿದರು. ಜನ್ಮತಃ ಶೈವ ಬ್ರಾಹ್ಮಣ ಪಂಥದವರಿದ್ದು ಭಕ್ತಿಪರ ಶಿವಚಿಂತಕರಾಗಿದ್ದರು. ತಮ್ಮ ೮ನೇ ವರ್ಷದ ವಯಸ್ಸಿನಲ್ಲೇ ಮನೆ ಬಿಟ್ಟರು. ವ್ಯಾಸಂಗಾಪೇಕ್ಷಿತರಾಗಿ ಸಂಗಮಕ್ಷೇತ್ರಕ್ಕೆ ಸಾಗಿದರು. ಗುರುಕುಲ ಸೇರಿ ಅಲ್ಲಿನ ಗುರುಪಥದಲ್ಲೇ ಬೆಳೆದರು. ವ್ಯಾಸಂಗಪ್ರಿಯತೆಯ ಚುರುಕು ಹಿಗ್ಗಿ ವಿದ್ಯೆ ಕಲಿತು ಶ್ರೇಷ್ಠ ಗುಣಗಳ ಸಂಪನ್ನರೆನಿಸಿದರು. ಮಾನವೀಯತೆಯ ಬೆಳಕು ಮೈಮನ ಮತಿಗಳನ್ನು ಮುತ್ತಿತು. ಸಾತ್ವಿಕತೆಯ ಬದುಕು ಬಾಳ್ವೆಯ ಗುರಿಗೆ ಹೆಗಲಾಯಿತು. ಅಷ್ಟರಲ್ಲಿ ತಮ್ಮ ಸೋದರ ಮಾವ ಬಲದೇವ ಹೆಣ್ಣು ಕೊಡಲು ಮುಂದಾದರು. ಆಗ ಬಲದೇವನ ಮಗಳು ಗಂಗಾಂಬಿಕೆಯನ್ನು ವರಿಸಿದರು. ಆಗಿನ ಕಲ್ಯಾಣದ ದೊರೆ ಬಿಜ್ಜಳನಲ್ಲಿ ಕರಣಿಕ ಸೇವೆಯಲ್ಲಿ ತೊಡಗಿದರು. ತಾಮ್ರದ ಪತ್ರವೊಂದು ದೊರೆತು ಆಸ್ಥಾನದಲ್ಲಿ ಓದಿದರು. ಸಂಶೋಧನೆಯಲ್ಲಿ ತೊಡಗಿ ಅತೀವ ಭಂಡಾರ

* ರಾಜೇಂದ್ರನಗರ, ಚಿತ್ರದುರ್ಗ-೫೭೭ ೫೦೧.

ವನ್ನೇ ತೋರಿದರು. ಮಾವ ಬಲದೇವನ ನಿಧನ ನಂತರ ತಾವೇ ಬಿಜ್ಜಳನ ಮಹಾಮಂತ್ರಿಯಾದರು. ಬದುಕಿನ ಹೆಜ್ಜೆಗಳನ್ನು ಸತ್ಯ, ನ್ಯಾಯ, ಧರ್ಮಗಳ ಪರಿಪಾಲನೆಯಲ್ಲಿ ನಡೆದು ತೋರಿದರು. ಜನತೆಗಾಗಿ ಹಗಲಿರುಳು ದುಡಿದರು. ಜನಾದರ ಜನಪ್ರೇಮಗಳ ವಿಶ್ವಾಸ ಹಿಗ್ಗಿ ಮೈಗೂಡಿತು. ಇವರ ಸಮಾತಾಭಾವದ ಜಾಗೃತ ನೀತಿ ವಿಕಾಸವಾಯಿತು. ನಿರಾಡಂಬರ, ಸೇವಾಮನೋಭಾವ, ನಿಸ್ವಾರ್ಥತೆಗಳು ಬದುಕಿನ ತುಂಬಾ ಮಿಂಚಿದವು. ತನ್ನ ಅಧಿಕಾರ ಹಿರಿಯದಾದರೂ ಎಲ್ಲರೊಡನೆ ಕಿರಿಯರಾಗಿಯೇ ತಮ್ಮ ಶರಣ ಧರ್ಮ ಪರಂಪರೆಯನ್ನು ಬೆಳೆಸಿದರು. ಅನೇಕ ಹೊಸ ಬಗೆಯ ಸುಧಾರಣೆಗಳನ್ನು ಜಾರಿಗೆ ತಂದರು. ಆಡಳಿತವನ್ನು ಸರಳಗೊಳಿಸಿದರು. ಸರ್ವರಲ್ಲಿಯೂ ಸಮಾನ ನೀತಿಯ ಜಾಗೃತ ವಿಶ್ವಾಸವನ್ನು ಬಿತ್ತಿದರು.

ಯಾವುದೇ ಜಾತಿಯವನಿದ್ದರು ಅವರಲ್ಲಿನ ಗುಣ, ಭಾವ, ನೀತಿ ನಡತೆಗಳಿಗೆ ಮಾನ್ಯತೆ ನೀಡಿದರು. ಸರ್ವ ಶರಣರನ್ನೂ ಒಂದಾಗಿ ಕೂಡಿಸಿದರು. ಎಲ್ಲಾ ಜಾತಿಯವರೊಡನೆ ಬೆರೆತು 'ಅನುಭವ ಮಂಟಪ'ವೆಂಬ ಮಹಾಮನೆಯನ್ನು ಕಟ್ಟಿದರು. ಪ್ರತಿ ಮನೆಗಳನ್ನು ಮುಟ್ಟಿ ಎಲ್ಲಾ ಮನಗಳನ್ನು ತಟ್ಟುವಂತಹ ಅನುಭವಪೂರಿತ ವಚನಗಳನ್ನು ರಚಿಸಿದರು. ಅತಿ ಸರಳ ಶೈಲಿಯ ಅಮೃತದಂತಹ ನೀತಿ ವಚನದ ಪ್ರಚಾರ ಕಾಲುವೆಯನ್ನು ಹರಿಸಿದರು. ಅಶ್ವಾರೂಢನಾಗಿ ಮುನ್ನಡೆದು ಜನಪರ ಆಡಳಿತವನ್ನು ದೊರಕಿಸಿದರು. ಕಾಳಜಿ ಹೊತ್ತ ಕರ್ತವ್ಯ ಜಾಗೃತಿಯಿಂದ ವಿಶ್ವಬಂಧುವೆನಿಸಿದರು. ವಚನ ಸಾಗರದ ಚನ್ನುಡಿಯ ಸುಧಾಜ್ಯೋತಿಯನ್ನು ಕನ್ನಡದಲ್ಲಿ ಬೆಳಗಿಸಿದರು. ಜಗಜ್ಯೋತಿ ಗುರು ಬಸವಣ್ಣನೆನಿಸಿ ಹೆಸರಾದರು. ತಿಳಿಗನ್ನದ ತಮ್ಮ ವಚನಗಳಲ್ಲಿ ನಾಡಜನತೆಯನ್ನು ಬೆಳಗು ಬೈಗು ಎಚ್ಚರಿಸುವಂತಹವರಾದರು. ತಮ್ಮ ತನುಮನಗಳನ್ನು ತ್ಯಾಗಮಾಡಿ ಕನ್ನಡ ನಾಡಿಗೆ ಅಪಾರಸೇವೆಯನ್ನು ಸಲ್ಲಿಸಿದರು. ಶರಣ ಬಳಗಕ್ಕೆ ಅಪ್ರತಿಮ ಹಿರಿಯರೆನಿಸಿದರು. ಯಾವುದೇ ಬಗೆಯ ಆಸೆಗೂ ಮನಗೊಡಲಿಲ್ಲ. ಅಪೂರ್ವ ತ್ಯಾಗಕ್ಕೆ ಜೀವನಾಡಿಯೆನಿಸಿ 'ಮಹಾದಾನಿ' ಎಂಬ ಕೀರ್ತಿಗೆ ಪಾತ್ರರಾದರು. ಎಂದೂ ಕೂಡ ಎಲ್ಲಿಯೂ ನಡೆ-ನುಡಿಯಲ್ಲಿ ತಪ್ಪದೇ ಶಿವಪ್ರಿಯನೆನಿಸಿದರು. ಅಂತಿಮವಾಗಿ ಕೂಡಲಸಂಗಮ ಕ್ಷೇತ್ರಕ್ಕೆ ಧಾವಿಸಿ ಶಿವೈಕ್ಯರಾಗಿ ಖ್ಯಾತ ಶರಣರಾಗಿ ಜಗಜ್ಯೋತಿಯಾದರು. ಹೀಗೆ ಬದುಕಿನ ನಿತ್ಯಪಥದಲ್ಲಿ ಬಸವಣ್ಣನವರ ಸಾಧನೆಗಳು ಮಹಾದ್ಭುತ. ಅವರ ಅನುಭವ ಪೂರ್ಣ ಹದ ಹೃದಯದಲ್ಲಿ ಮೂಡಿ ಬಂದ ರಸವೆತ್ತ ವಚನ ಸೌರಭ ಆಚಂದ್ರಾರ್ಕ. ಬದುಕಿನ ವಿಚಾರದ ವೈಶಾಲ್ಯತೆಯ ಗಾಢವಾದ ನೀತಿ ಚಿಂತನೆ ಇವರ ವಚನಗಳನ್ನು ಗಮನಿಸಿದವರಿಗೆ ದೊರಕ ದಿರದು. 'ಕೂಡಲಸಂಗಮದೇವಾ' ಎಂಬ ಅಂಕಿತದಲ್ಲಿ ತಮ್ಮ ವಚನಗಳನ್ನು ರಚಿಸಿ ಕೊಟ್ಟಿದ್ದಾರೆ. ಇವೆಲ್ಲವೂ ಸಹಜಾಭಿಪ್ರಾಯದ ನೀತಿಪರ ಸಂಗತಿಗಳನ್ನೇ ಹೊತ್ತವಾಗಿರುತ್ತವೆ. ದುಷ್ಟಮತಿಗಳನ್ನು ಗುರುತಿಸಿ ಸಮಾಜದ ಓರೆ-ಕೋರೆಗಳನ್ನು ಸರಿಪಡಿಸುವಂಥ ಉಪಕಾರದ ಕರೆಯಿರುತ್ತದೆ. ಶರಣ ಗುರು ಲಿಂಗಜಂಗಮರ ಭಾವನೀತಿಯಿದೆ. ಜ್ಞಾನ ವಿದ್ಯೆ ಕರ್ಮ ಭಕ್ತಿ ಧ್ಯಾನಗಳ ಮಹತ್ವವಿದೆ. ಗುರು- ಹಿರಿಯ ಆಚಾರ-ವಿಚಾರಗಳ ಕಾಯಕಪ್ರಜ್ಞೆಯ ಆದರ್ಶತೆ ಇದೆ. ವಚನಗಳ ಯಾವ ಭಾಗದ ಯಾವ ಮೂಲೆಗೆ ಹೋದರೂ ಅಲ್ಲಿ ಎಚ್ಚರದ ತಿಳುವಳಿಕೆಯ ಬೋಧನೆಯಿದೆ. ಒಳಹೊಕ್ಕು ಕೆದಕಿ ನೋಡಿದಾಗ ಮನುಕುಲದ ಸಾಫಲ್ಯತೆಗೆ ಗೆಲುವಿನ ಪಾಠವೂ ದೊರೆಯುತ್ತದೆ. ಈ ವಚನಗಳನ್ನು ತಿಳಿಯಲು ಸಮಾಧಾನಕರ ವ್ಯಾಸಂಗ ಅತಿಮುಖ್ಯ. ಓದಿ ತಿಳಿಯಬೇಕು, ತಿಳಿದುದನ್ನು ಸ್ವೀಕರಿಸಬೇಕು: ಬದುಕಿನಲ್ಲಿ ತಲೆ ಹಾಕುವ ಯಾವ ಬಗೆಯ ಸಮಸ್ಯೆಗೂ ಹೆದರಬಾರದು. ಜಾಗೃತಿಕ ತತ್ವದ ಪ್ರಾಮಾಣಿಕ ನೀತಿಯಿಂದಲೂ ಸಮರ್ಥ ಎದೆಗಾರಿಕೆಯಿಂದಲೂ ಹೋರಾಡಿ ಜಯಿಸಬೇಕು.

ಮೇಲು-ಕೀಳಿನ ಭಾವ ಹಳಿಯಬೇಕು. ಜಾತಿ-ಕೋಮಿನ ನೀತಿಯನ್ನು ತುಳಿದು ಸೌಜನ್ಯತೆ ಹಿಗ್ಗಲು ಬಹು ಬಗೆಯ ನೀತಿ ಬೆಳಕು ಬಸವಣ್ಣನವರ ವಚನಗಳಲ್ಲಿ ಅಪಾರ. ತಾರತಮ್ಯದ ಭಿನ್ನಬೇಧಗಳ ಸುಳುಹಿರದೆ ಏಕಮುಖ ಉದ್ದೇಶದಿಂದ ಬಾಳಿ ಬದುಕಲು, ಬದುಕು ಸಾರ್ಥಕವಾಗಲು ಅಪೂರ್ವವಾದ ತಿಳುವಳಿಕೆಯಿದೆ. ಸಜ್ಜನಿಕೆಯ ಪರಂಪರೆಯನ್ನು ಎದುರಿಟ್ಟು ನಿದರ್ಶನಗಳ ಮೂಲಕವೇ ಜೀವನದ ಪಾಠ ಸಾಕಷ್ಟಿದೆ. ಲಘುಸಾಲುಗಳಲ್ಲಿನ ಸರಳಹೆಜ್ಜೆಗಳ ನೀತಿ ಬೆಳಕು ಈ ವಚನಗಳಲ್ಲಿದೆ. ಓದುಗನಿಗೆ ಹಿತ ನೀಡಿ ಮುದ ಕೊಟ್ಟು ಅರಿವಿನ ಹಾದಿಗೆ ತಂದು ಬಿಡುತ್ತವೆ. ಸುಮಾರು ೮೦೦ ವರ್ಷಗಳ ಹಿಂದೆ ರಚಿಸಲ್ಪಟ್ಟಿದ್ದರೂ ಈ ವಚನ ಶೈಲಿ ಯಾರಿಗೂ ಬೇಸರವಾಗದು. ಕಾಲಮಾನಕ್ಕನುಗುಣ ಅಂದಿನ ವಿದ್ಯಮಾನದಂತೆ, ಆಗಿನ ಆಡುನುಡಿಯಂತೆ ಕೆಲ ಪದಗಳು ಬೇಗ ಅರ್ಥವಾಗದೆ ಕೊಂಚ ಕಷ್ಟವಾಗಬಹುದು. ಆದರೂ ಅನುಭವತೆ ಮೈವೆತ್ತ ವಿಚಾರ ವಿವೇಕ ಸಂಗತಿಗಳು ಸಂಪದ್ಭರಿತ. ನಿತ್ಯಜೀವನದ ಬದುಕಿನ ಪಾಠ ಈ ವಚನಗಳಲ್ಲಿ ಸಮಗ್ರವಾಗಿರುತ್ತದೆ. ಎಲ್ಲವೂ ಕೂಡ ಸಾಮಾಜಿಕ ಕಳಕಳಿ ಹೊತ್ತ ಪ್ರಾತಿನಿಧಿಕ ಸಂಗತಿಗಳೇ ಆಗಿರುತ್ತವೆ.





# ಮನೆ-ಮನೆಗೆ ಬಸವಣ್ಣನವರ ಉತ್ಸವ : ಅರಿವು, ಆಚರಣೆಗೆ ಉತ್ಸಾಹ

- ಸ.ರಾ. ಸುಳಕೂಡೆ *

ಮನುಕುಲವನ್ನು ಸಂಕುಚಿತ ಆಚರಣೆಗಳಿಗೆ ಕಟ್ಟಿ ಹಾಕುವ ಮತ್ತು ಮನುಜ-ಮನುಜರೊಳಗೆ ಮೇಲು-ಕೀಳಿನ ಕಿತ್ತಾಟವ ಹಬ್ಬಿಸುವ ಹುನ್ನಾರಗಳು ವೈಜ್ಞಾನಿಕ ಯುಗದೊಳಗೂ ಪ್ರಾಶಸ್ತ್ಯವನ್ನು ಪಡೆದುಕೊಂಡಿರುವುದು ಕಂಡುಕೊಂಡ ಸತ್ಯವಾಗಿದೆ. ಮನುಷ್ಯ-ಮನುಷ್ಯರನ್ನು ಗೌರವಿಸುವ ಮತ್ತು ಏಕೀಕೃತಗೊಳಿಸುವ ನಿಟ್ಟಿನೊಳಗೆ ದೃಢವಾದ ಹೆಜ್ಜೆಗಳು ಮನ್ನಣೆಗೆ ಪಾತ್ರವಾಗುತ್ತಿಲ್ಲ. ಎಲ್ಲೆಲ್ಲೂ ಮನುಷ್ಯನನ್ನು ವಿಂಗಡಿಸಿ-ವಿಂಗಡಿಸಿ ನೋಡುವ, ವ್ಯವಹರಿಸುವ ಧಾವಂತತೆಯು ಸಾಂಗಗೊಂಡಿದೆ. ಮನುಷ್ಯ ಮನುಷ್ಯರೊಳಗೆ ಅನ್ಯೋನ್ಯತೆಯನ್ನು ಪ್ರೀತಿ-ಆದರ ಭಾವವನ್ನು ತರುವ ನಿಟ್ಟಿನಲ್ಲಿ ಚಾಲ್ತಿಗೆ ಬಂದಿರುವ ಪ್ರಯೋಗಗಳಲ್ಲಿ ಬಸವಾದಿ ಶರಣರ ಮಾರ್ಗವು ಅತ್ಯಂತ ಗತಿಶೀಲ ಮತ್ತು ಅರಿವು-ಆಚಾರದ ಅಚಲತೆ ಹೊಂದಿರುವುದು ತಿಳಿದು ಬರುತ್ತದೆ. ಬಸವಣ್ಣ ಸಕಲರಿಗೂ ಶಿವಬೆಳಕು ಅಂದರೆ ಸತ್ಯ-ಶುದ್ಧ ಕಾಯಕ ಮತ್ತು ಸಮಾನತೆಯ ಬೆಳಕನ್ನು ಪಸರಿಸಿದ್ದು ವಿಶೇಷ. ಅಂದು ಬಸವಣ್ಣನ ಕ್ರಿಯಾಜ್ಞಾನದ ಮಹತಿ ಮಾನವೀಯ ಮೌಲ್ಯದ ಮಹತಿ ಆಗಿದೆ.

*ಬಸವಣ್ಣ ಬರುವಾಗ ಶಶಿಧರನ ಭಕ್ತರು*
*ಕುಶಲದ ನುಡಿಗಳ ನುಡಿದಾರು ಸುಷ್ಟಿ*
*ಮನೆಮನೆಗೆ ಬಸವನ ಉತ್ಸವ ಮೆರೆದಾವ್ರ ಸುಷ್ಟಿ*

ಬಸವಣ್ಣನವರು ಸಕಲ ಜೀವಾತ್ಮರಿಗೆ ಲೇಸನ್ನು ತರುವ ಸರಳಾತಿ-ಸರಳ ಮಾರ್ಗವನ್ನು ತೋರಿಸಿದ್ದು ಬದುಕಿನ ಶ್ರೇಷ್ಠತೆಗೆ ಬಲ ತಂದ ಮಾರ್ಗವನ್ನು ತೋರಿಸಿದ್ದು ಬದುಕಿನ ಶ್ರೇಷ್ಠತೆಗೆ ಬಲತಂದ ಸಂಗತಿಗಳಲ್ಲಿ ಪ್ರಮುಖವಾಗಿದೆ. ಬಸವಣ್ಣನವರು ಸಕಲರೂ ಕೂಡಿ ಬಾಳುವ ಸಮಾಜ ರಚನೆಯೊಳಗೆ ಆಸಕ್ತಿ ಹೊಂದಿದ್ದರಲ್ಲದೆ ಅನುಭವ ಮಂಟಪ ಮತ್ತು ಮಹಾಮನೆಯ ಮೂಲಕ ಸದಾಚಾರ-ಸಜ್ಜನಿಕೆ ಯುಳ್ಳ ಜನಸಮೂಹ ಪ್ರಚಲಿತಕ್ಕೆ ಬರುವಂತೆ ನೋಡಿ ಕೊಂಡದ್ದು ಉಲ್ಲೇಖನೀಯ. ಬಸವಣ್ಣನವರು ತಮ್ಮ ವಚನಗಳಲ್ಲಿ ಸತ್ಯ-ಶುದ್ಧ ಕಾಯಕ, ಸತ್ಯ, ಸದಾಚಾರ, ಸಜ್ಜನಿಕೆ, ದಾಸೋಹ, ಅರಿವು-ಆಚಾರಕ್ಕೆ ಪ್ರಾಧಾನ್ಯತೆ ಕೊಟ್ಟದ್ದನ್ನು ಕಾಣುತ್ತೇವೆ. ಜನರು ಕೂಡಿ ಚಿಂತನೆಗೈದು ಬದುಕಿನೊಳಗೆ ಸಜ್ಜನಿಕೆ-ಸದಾಚಾರಗಳನ್ನು ರೂಢಿಸಿಕೊಳ್ಳುವಂತೆ ಮಾಡಿದ ಬಸವಣ್ಣನವರು ಆಚಾರವೇ ಸ್ವರ್ಗ, ಅನಾಚಾರವೇ ನರಕ, ಆಚಾರವೇ ಕುಲಜತನವೆಂದು ಸಾರಿದ್ದು ಇಂದಿನ ಯುಗಕ್ಕೂ ಉತ್ಸಾಹ ತುಂಬುವ ಆದರ್ಶವೇ ಆಗಿದೆ.

ಎಲ್ಲಿಯವರೆಗೆ ಅರಿವು ಆಚರಣೆಯಲ್ಲಿ ಪರಿವರ್ತನೆಗೊಳ್ಳಲಾರದೋ ಅದು ಅರಿವೇ ಅಲ್ಲ ಎಂಬ ಸಂಗತಿಯನ್ನು ಮನದಟ್ಟು ಮಾಡಿಕೊಂಡಿದ್ದ ಬಸವಣ್ಣನವರು ಅರಿವು-ಆಚಾರದೊಳಗೆ ಏಕತೆ ಸಾಧಿಸಿದ್ದರಿಂದಲೇ ದೇಶ-ವಿದೇಶಗಳಿಂದ ಸಜ್ಜನರು ಸದಾಚಾರಿಗಳು ಕಲ್ಯಾಣದತ್ತ ಧಾವಿಸಿ ಬಂದರಲ್ಲದೆ ಬಸವಣ್ಣನವರ ಕಾಯಕ, ದಾಸೋಹ, ಸತ್ಸಂಗ, ಅನುಭಾವಗೊಳಗೆ ಸಕ್ರಿಯವಾಗಿ ಪಾಲುಗೊಂಡು ಸಮಾನತೆಯ ಸಮಾಜವನ್ನು ಕಟ್ಟಿಕೊಂಡು ಬದುಕಿದರು, ಬಿದ್ದವರನ್ನು ಅಪ್ಪಿಕೊಂಡು ಬದುಕುವ ಛಲಗಾರಿಕೆಗೆ ಬಲವನ್ನು ತುಂಬಿ ನಿಂತರು. ಅರಿವಿನ ನಡೆ, ಅರಿವಿನ ನುಡಿ ಅರಿವಿನ ಮೂಲವನರಿತ ಜನಸಮೂಹವು ಮಾನವನು ಒಗ್ಗೂಡಿ, ಯಾವುದೇ ತಾರತಮ್ಯ, ಭೇದಭಾವ, ಮೇಲು-ಕೀಳು, ಬಡವ-ಬಲ್ಲಿದ, ಆ ಕುಲ ಈ ಕುಲವೆನ್ನದೇ ಬದುಕಲು ಸಾಧ್ಯವಿದೆ ಎಂಬುದನ್ನು ತೋರಿಸಿಕೊಟ್ಟದ್ದು ಇಂದಿಗೂ ಮನನ ಯೋಗ್ಯವಾಗಿದೆ, ಎಂಬುದನ್ನು ತೋರಿಸಿಕೊಟ್ಟದ್ದು ಇಂದಿಗೂ ಮನನ ಯೋಗ್ಯವಾಗಿದೆ.

*ಬಸವನ ಮಾತೆ ಮಾತು ..........*
*ಬಸವನ ಬಟ್ಟೆ ಬಟ್ಟೆ*
*ಬಸವನ ಬಿಂಕದ ಭಾಷೆ ಭಾಷೆ*
*ಹೋ ಬಸವಣ್ಣನ ನೇಮವೆ ನೇಮವುರ್ವಿಯೊಳ್*

* ನಂ. ೧೩೧೯, 'ಶಿವಪ್ರಸಾದ', ಬಸವೇಶ್ವರ ಬಡಾವಣೆ, ರಾಮತೀರ್ಥ ನಗರ, ಬೆಳಗಾವಿ.

ಅಂದಿನ ಕಾಲಮಾನದೊಳಗೆ ಜನರಿಗೆ ನಿಜವಾದ ಮಾನವೀಯತೆಯ ಮರ್ಮ ಹೊರಹೊಮ್ಮಿದ ಪ್ರತೀಕವೆಂಬಂತೆ ಸಮಾಜದ ಕೆಳಸ್ಥರದ ಜನರು ಮನಬಿಚ್ಚಿ ಮಾತನಾಡಿದರಲ್ಲದೆ ಬಸವಣ್ಣನವರು ಹೋದ ದಾರಿಯ ನೋಡಿ, ಅವರಿಗೊಂದು ಬದುಕಿನ ಸಮಾನತೆಯ ದಾರಿ ಸಿಕ್ಕಿತು. 'ಬಸವಣ್ಣನವರು ಸಮಾಜದೊಳಗೆ ಯಾರೂ ದುಡಿಯದೇ ಇರದಂತೆ ನೋಡಿಕೊಂಡರಲ್ಲದೇ ಬೇಡುವವರು ಇಲ್ಲದಂತಹ ಪರಿಸರವನ್ನು ನಿರ್ಮಿಸಿದರು. ಇಂಥ ಸ್ವಾವಲಂಬಿ, ಸ್ವಾಭಿಮಾನಿ, ಸ್ವತಂತ್ರ್ಯದ ಅನುಭಾವದ ನೆಲೆಯೊಳಗೆ ಬದುಕನ್ನು ನಿರ್ವಹಿಸಿದ ಸಂಗತಿಯನ್ನು ಕಂಡು ಹರಿಹರ ಮಹಾಕವಿಯು ಬಸವನ ಮಾತೆ ಮಾತು' ಎಂದು ಬಣ್ಣಿಸಿದ್ದು ಉಚಿತವೇ ಆಗಿದೆ. ಬಸವಣ್ಣ ಕಾಯಕದ ರೂವಾರಿ, ದಾಸೋಹದ ಸದಾಚಾರಿ.

ಬಸವಣ್ಣನವರು ಮಾನವನು ಸಹಜವಾಗಿ ಎಡವುದ ಪರಿಯನ್ನು ಅವಲೋಕಿಸಿದರಲ್ಲದೆ ಮನದ ಮರ್ಕಟ ಗುಣಗಳಿಂದ ದೂರವಿರುವ ಹದುಳ ಮಾರ್ಗವನ್ನು ಅನುಸರಿಸಿದರೆ ಪಡಿ ಪದಾರ್ಥಗಳು ಸಹಜವಾಗಿ ದೊರೆಯುವುವು ಎಂದು ತೋರಿಸಿಕೊಟ್ಟರು. ಯಜ್ಞಯಾಗಾದಿಗಳಿಂದ ಬಹು ದೂರವೇ ನಿಂತ ಬಸವಣ್ಣನವರು ದೇವರ ಹೆಸರಿನಲ್ಲಿ ಪ್ರಾಣಿಬಲಿಯನ್ನು ಕೊಡುವ ಪದ್ಧತಿಯ ವಿರುದ್ಧ ಸಿಡಿದೆದ್ದು ನಿಂತರು. ಮನುಕುಲದ ಇತಿಹಾಸದಲ್ಲಿಯೇ 'ದಯವೇ ಧರ್ಮವೆಂದು' ಸಾರಿದ ಬಸವಣ್ಣನವರು ಸಕಲ ಜೀವಾತ್ಮರಿಗೆ ಲೇಸನ್ನು ತರುವ ಕಾಯಕದೊಳಗೆ ಸದಾ ನಿರತಗೊಳ್ಳುವ ಮಾರ್ಗವನ್ನು ಜಗತ್ತಿಗೆ ತೋರಿಸಿಕೊಟ್ಟರು. ತನಗೊಂದು ಅನ್ಯರಿಗೆ ಇನ್ನೊಂದು ಎಂಬ ಧೂರ್ತತನವನು ಉಚ್ಚಾಟಿಸಿದ ಬಸವಣ್ಣನವರು ಮನದ ಮೈಲಿಗೆಯನ್ನು ಕಳೆವ ಸಾತ್ವಿಕ ಗುಣಗಳನ್ನು ಅನುಸರಿಸುವ ಅನುಭಾವವನ್ನು ವಚನದ ಮೂಲಕ ಸಾದರಪಡಿಸಿದರು. ಸತ್ಯ, ಸದಾಚಾರಗಳೇ ಬಸವಣ್ಣನವರ ಧರ್ಮವಾಗಿದೆ.

*ತನಗೆ ಮುನಿವವರಿಗೆ ನಾ ಮುನಿಯಲೇಕಯ್ಯಾ?*
*ತನುವಿನ ಕೋಪ ತನ್ನ ಹಿರಿಯತನದ ಕೇಡು;*
*ಮನದ ಕೋಪ ತನ್ನರುಹಿನ ಕೇಡು :*
*ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ*
*ನೆರೆಮನೆಯ ಸುಡುವುದೆ, ಕೂಡಲಸಂಗಮದೇವಾ?*

ಗುಡಿ-ಗುಂಡಾರ, ಪುಣ್ಯಕ್ಷೇತ್ರ, ಪವಾಡಪುರುಷ ಎಲ್ಲವನ್ನು ಪರಾಮರ್ಶಿಸಿದ ಬಸವಣ್ಣನವರು ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ? ಎಂದು ತಿಳಿ ಹೇಳಿದ್ದಾರೆ. ಬಸವಾದಿ ಶರಣರು ಈ ಸಂಸಾರ ಹೇಯನೆಂದು, ಭ್ರಮೆ ಮಿಥ್ಯವೆಂದು, ಪುಣ್ಯಕ್ಕಾಗಿ ಪೂಜೆ ಮಾಡಿಸಿರೆಂದು ಹೇಳಲಿಲ್ಲ. ಈ ಪರಿಯ ಅನುಭಾವ' ಹಂಚಿಕೊಂಡ ವಚನಗಳು ಜೀವನಾದರ್ಶಗಳಾಗಿದದ್ದು ವಿಶೇಷ

*'ವಚನ ಮಂಟಪ ಬಳ್ಳಿ ಶುಚಿ ಮೊಗ್ಗೆ ಹೂಬಿಡಲು*
*ರುಚಿಜೇನ ಹುಟ್ಟಿ ಹೊಸಮತವ ಕಟ್ಟಿದರು*
*ಸೊಸಿ ವಚನದ ತಿರುಳ ಬೀಸಿದವು ಶಿವಗಾಳಿ*
*ಮೂಸ ಬಂದಂತೆ ಗುಂಗಿಗಳು-ಹೂಗಳಿಗೆ*
*ರಾಗಿ ಜನ ಬಂತು ಮಂಟಪಕೆ'*

ಅನುಭವ ಮಂಟಪದೊಳಗೆ ಮಾನವನ ಬದುಕಿನೊಳಗೆ ನೆಮ್ಮದಿ ಸುಖ, ಶಾಂತಿ ತರುವ ಚಿಂತನೆಗಳು ಮಾರ್ದನಿ ಸಿದವು. ಈ ಧ್ವನಿಗಳಲ್ಲಿ ಜೀವಸತ್ವ, ಸದಾಚಾರ, ಸಜ್ಜನಿಕೆ, ಮಾನ್ವ ಮಮತೆ, ಮಾನವೀಯ ಮೌಲ್ಯಗಳು ತುಂಬಿವೆ. ಕಿತ್ತಾಟ, ಬಡಿದಾಟ, ಮೇಲಾಟ, ತುಚ್ಚಾಟ, ತರ-ತಮದೂಟ ಎಲ್ಲವನ್ನು ಸಮಾಪ್ತಿಗೊಳಿಸಿ ಮಾನವ ಬದುಕಿನೊಳಗೆ ಉತ್ಸವ ತಂದ ಶ್ರೇಯಸ್ಸಿಗಾಗಿ ಇಂದು ಎಲ್ಲರ ಮನೆ-ಮನ ಗಳಲ್ಲಿ ಬಸವ ಪ್ರಭೆ ಬೆಳಗುತ್ತಲಿದೆ. ತ್ರಿವಿಧ ದಾಸೋಹಕ್ಕೆ ನೆಲೆಯಾಗಿ ನಿಂತ ಬಸವಣ್ಣ ವಿಶ್ವವಿಭೂತಿಗಳಲ್ಲಿ ಒಬ್ಬರಾಗಿದ್ದಾರೆ.

*ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ !*
*ವೇದ ಘನವೆಂಬೆನೆ? ಪ್ರಾಣಿವಧೆಯ ಹೇಳುತ್ತಿದೆ!*
*ಸ್ಮೃತಿ ಘನವೆಂಬೆನೆ? ಮುಂದಿಟ್ಟರಸುತ್ತಿದೆ !*
*ಅಲ್ಲೆಲ್ಲಿಯೂ ನೀವಿಲ್ಲದ ಕಾರಣ, ತ್ರಿವಿಧ ದಾಸೋಹ*
*ದಲ್ಲಲ್ಲದೆ ಕಾಣಬಾರದು ಕೂಡಲಸಂಗಮದೇವರ.*

ಜಗದ ಬದುಕಿನೊಳಗೇ ಸ್ವರ್ಗ-ನರಕಗಳಿವೆ. ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದಡೆ ನರಕ ಎಂಬ ಸರಳಾತಿ ಸರಳ ನಡೆ-ನುಡಿಗಳನ್ನು ಕಲಿಸಿರುವ ವಿಶ್ವಗುರು ಬಸವಣ್ಣನವರ ಅನುಭಾವ ಆಚರಣೆಯೊಳಗೆ ತರುವ ಉತ್ಸವ-ಉತ್ಸಾಹ ನಮ್ಮೊಳಗೆ ಜಾಗ್ರತೆಗೊಂಡಲ್ಲಿ ನಾವು ಮಾನವರಾಗಿ, ಇನ್ನೊಬ್ಬರು ಮಾನವರಾಗಲು ಅನುವು ಮಾಡಿಕೊಡುತ್ತೇವೆಂದು ಹೇಳಬಹುದಾಗಿದೆ.





# ಧರ್ಮವೀರ ಮಹಾವೀರ

- ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಸ್ವಾಮೀಜಿ*

**ಅ**ನಾದಿ ಕಾಲದಿಂದಲೂ ಜೈನಧರ್ಮವು ಸರ್ವ ಜೀವಿಗಳು ಬದುಕುವ ಕಲೆಯನ್ನು ಹೇಳುತ್ತ ಬಂದಿದೆ. ಪ್ರತಿಯೊಂದು ಪ್ರಾಣಿಯು ಸುಖವನ್ನು ಬಯಸುತ್ತದೆ. ನೆಮ್ಮದಿಯ ಬಾಳನ್ನು ಹೊಂದಲು ಪ್ರಯತ್ನಿಸುತ್ತವೆ. ಸೂಕ್ಷ್ಮ ಜೀವಿಯಿಂದ ಬಹುಗಾತ್ರದ ಪ್ರಾಣಿಯು ಕೂಡ ಸಂಸಾರದ ಸುಖವನ್ನು ಭೋಗಿಸಲು ಇಚ್ಛಿಸುತ್ತಾ ಕಾಲಕ್ಷೇಪ ಮಾಡುತ್ತವೆ. ಸಂಸಾರಚಕ್ರದಲ್ಲಿ ಒಮ್ಮೆ ಸಿಲುಕಿದ ಪ್ರಾಣಿ ಅದರಲ್ಲಿಯೇ ಲಿಪ್ತವಾಗಿರಲು ಬಯಸುತ್ತವೆ. ಮನುಷ್ಯ ಸಂಕಟಗಳಿಂದ ನರಳುತ್ತಾ ಇರುತ್ತಾನೆ. ದುಃಖ ಚಕ್ರದಿಂದ ಹೊರಬರಲು ಉಪಾಯ ಹುಡುಕುತ್ತಿರುತ್ತಾನೆ. ದಾರಿ ಕಾಣದೇ ಪರಿತಪಿಸುತ್ತಾನೆ. ದುಃಖದ ಕಾರಣ ಹುಡುಕದೇ ಸಂತೋಷವನ್ನು ಹೊಂದಲು ಸಾಧ್ಯವಾಗದು. ವಿವೇಕವುಳ್ಳ ಮನುಷ್ಯ ಪ್ರಾಣಿ ಮಾತ್ರ ಉಪಾಯಗಳನ್ನು ಹುಡುಕಿ ಸಂಸಾರ ನಿವೃತ್ತಿಯನ್ನು ಹೊಂದುತ್ತಾನೆ.

ಸಂಸಾರ ದುಃಖಗಳಿಂದ ಪಾರಾಗಲು ಕಾಲಕಾಲಕ್ಕೆ ಮಹಾಪುರುಷರು ಸಾಧನೆ ಮಾಡುವ ಮೂಲಕ ಬೋಧಿಸಿ ಹೋಗಿರುತ್ತಾರೆ. ಪ್ರತಿಯೊಂದು ಜೀವಿಗೂ ಬೇಕಾಗಿರುವ ಮೌಲ್ಯಗಳನ್ನು ಸಾರಿರುತ್ತಾರೆ. ಜೈನಧರ್ಮದಲ್ಲಿಯೂ ೨೪ ಜನ ತೀರ್ಥಂಕರರು ಸಂಸಾರದ ಪ್ರಾಣಿಗಳಿಗೆ ಹಿತೋಪದೇಶವನ್ನು ನೀಡಿರುತ್ತಾರೆ. ಶ್ರೀ ವೃಷಭನಾಥರಿಂದ ಶ್ರೀ ಮಹಾವೀರರವರೆಗೆ ಜೀವಿಗಳು ಸುಖವಾಗಿ ನೆಮ್ಮದಿಯಾಗಿ ಬದುಕಲು 'ಧರ್ಮ'ವೆಂಬ ತಳಹದಿಯನ್ನು ಹಾಕಿಕೊಟ್ಟಿರುತ್ತಾರೆ. ಸರ್ವ ಧರ್ಮಗಳು ಇದೇ ಮಾರ್ಗವನ್ನು ತೋರಿಸಿವೆ. ಈ ಯುಗದಲ್ಲಿ ಅಂತಿಮ ತೀರ್ಥಂಕರರಾಗಿ ಅವತರಿಸಿ ಸಂಸಾರ ಸಾರತೆಯನ್ನು ಸಾರಿ ಮುಕ್ತಿ ಮಾರ್ಗೋಪದೇಶವನ್ನು ಭಗವಾನ್ ಶ್ರೀಮಹಾವೀರರು ನೀಡಿದರು.

***ಮಹಾವೀರರ ಅವತಾರ :***

ಭಗವಾನ್ ಶ್ರೀ ವರ್ಧಮಾನ ಮಹಾವೀರರು ಈಗಿನ ಬಿಹಾರ ಪ್ರಾಂತ್ಯದ ಕುಂಡ ಗ್ರಾಮ(ವೈಶಾಲಿ)ದಲ್ಲಿ ಚೈತ್ರ ಶುಕ್ಲ ತ್ರಯೋದಶಿಯ ಶುಭದಿವಸದಂದು ಅವತರಿಸಿದರು. ಹುಟ್ಟುತ್ತಲೇ ಮತಿ, ಶ್ರುತ ಜ್ಞಾನಗಳ ಜೊತೆಗೆ ಅವಧಿ ಜ್ಞಾನವನ್ನು ಹೊಂದಿದ್ದರಿಂದ ಸಾಮಾನ್ಯರಂತೆ ಅವರಿಗೆ ಯಾವುದೇ ಅಕ್ಷರಾಭ್ಯಾಸ ಅಗತ್ಯತೆ ಇರಲಿಲ್ಲ. ತೀಕ್ಷ್ಣ ಬುದ್ಧಿಯುಳ್ಳ ಅವರನ್ನು ನೋಡಿದವರ ಮತಿಯು ಶುದ್ಧವಾಗುತ್ತಿತ್ತು. ಹಾಗಾಗಿಯೇ ಅವರು 'ಸನ್ಮತಿ' ಎನಿಸಿಕೊಂಡಿದ್ದರು. ತೀರ್ಥಂಕರ ಪ್ರಕೃತಿ ಬಂಧವಾಗಿದ್ದವರಿಗೆ 'ವಜ್ರ ವೃಷಭ ನಾರಾಚ ಸಂವಹನ'ವಿರುತ್ತದೆ. ಹಾಗಾಗಿ ಅನಂತಶಕ್ತಿಯುಳ್ಳವರಾಗಿರುತ್ತಾರೆ. ಅವರ ಮುಂದೆ ಯಾವುದೇ ಪ್ರಾಣಿಗಳು ಯುದ್ಧ ಮಾಡಲು ಅಶಕ್ಯ ಹಾಗಾಗಿ ವೀರ-ಮಹಾವೀರರೆಂದು ಎನಿಸಿಕೊಂಡ ಮಹಾಪುರುಷರ ವ್ಯಕ್ತಿತ್ವ ಅವರದ್ದಾಗಿತ್ತು.

ಯುವಾವಸ್ಥೆಯಲ್ಲಿಯೇ ಸಂಸಾರದ ಸಂಬಂಧಗಳನ್ನು ಕಳಚಿ, ತನ್ನ ಆತ್ಮಕಲ್ಯಾಣ ಮಾಡಿಕೊಳ್ಳುವ ಹಾಗೂ ಸನ್ಮಾರ್ಗವನ್ನು ತೋರಿಸುವ ಸಲುವಾಗಿ ೩೦ನೇ ವಯಸ್ಸಿನಲ್ಲಿಯೇ ದೀಕ್ಷೆ(ಸನ್ಯಾಸ) ಗ್ರಹಣ ಮಾಡಿದರು. ೧೨ ವರ್ಷಗಳ ಕಾಲ ಸಾಧನೆ ಮಾಡಿದರು. ೪೨ನೇ ವಯಸ್ಸಿನಲ್ಲಿ 'ಕೇವಲ ಜ್ಞಾನ(ಅರಿಹಂತ)' ಹೊಂದಿದರು. ಸಾಧನೆಯ ಪ್ರತಿಫಲವಾದ ದಿವ್ಯಜ್ಞಾನವನ್ನು ಹೊಂದಿದ ಮಹಾವೀರರು ಸಮವಸರಣವೆಂಬ ಧರ್ಮ ಸಭೆಯ ಮೂಲಕ ಭವ್ಯಜೀವಿಗಳಿಗೆ ಉಪದೇಶವನ್ನು ನೀಡಿದರು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಮೌಢ್ಯಗಳನ್ನು ಹಿಂಸೆಯನ್ನು ವಿರೋಧಿಸಿದರೆ ಸಮ್ಯಕ್ತ್ವವನ್ನು ಹೊಂದುವ ಉಪಾಯವನ್ನು ಹೇಳಿ ಮಿಥ್ಯಾತ್ವವನ್ನು ಬಿಡಿಸಲು ಪ್ರಯತ್ನಿಸಿದರು. ರಾಜಾ ಶ್ರೇಣಿಕನಂತೆ ಅನೇಕ ರಾಜರು ಮಹಾವೀರರ ಆಶ್ರಯ ಹೊಂದಿದರು. ತಮ್ಮ ೭೨ನೇ ವಯಸ್ಸಿನಲ್ಲಿ ಅಂತಿಮ ಕರ್ಮಗಳನ್ನು ನಿರ್ಜರ ಮಾಡಿ ಮೋಕ್ಷವನ್ನು ಹೊಂದುವ ಮೂಲಕ ಶಾಶ್ವತ ಸುಖವನ್ನು ಹೊಂದಿದರು.

ಧರ್ಮದ ಆಚರಣೆ ಮಾಡಲು ವಯಸ್ಸಿನ ಮಿತಿಯಿಲ್ಲ ಎಂಬ ಸಂದೇಶವನ್ನು ಮಹಾವೀರರು ತೋರಿದ್ದಾರೆ. ತಮ್ಮ

* ಹೊಂಬುಜ (ಹುಮಚ) ಜೈನಮಠ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.





ಯುವಾವಸ್ಥೆಯಲ್ಲಿಯೇ ರಾಜ್ಯ, ಸಂಪತ್ತು, ಇತ್ಯಾದಿ ಸಂಸಾರದ ವ್ಯಾಮೋಹವನ್ನು ತೊರೆದು ಧರ್ಮದ ಆಶ್ರಯದಲ್ಲಿ ಮುನ್ನಡೆದರು. ಆಗಾಗ ಕೇಳಿ ಬರುವ ಮಾತಿನಂತೆ ಧರ್ಮಾಚರಣೆ ಏನಿದ್ದರೂ ವೃದ್ಧಾವಸ್ಥೆಯಲ್ಲಿ. ಈಗೇನಿದ್ದರೂ ಭೋಗ ಜೀವನ ಎಂದು. ಈ ಮಾತು ಖಂಡಿತಾ ಮಿಥ್ಯೆ. ಧರ್ಮಕ್ಕೆ ವೃದ್ಧಾವಸ್ಥೆಯೇ ಇಲ್ಲ. ಯಾರು ಧರ್ಮವನ್ನು ನಂಬಿ ನಡೆಯುತ್ತಾರೆ ಅವರು ಸದಾ ಮಾನಸಿಕವಾಗಿ ಯುವಕರಂತೆ ಉತ್ಸಾಹ, ಸಂತೋಷದಿಂದ ಬದುಕನ್ನು ಸಾಗಿಸುತ್ತಿರುತ್ತಾರೆ. ಇದಿಲ್ಲದೆ ಇರುವವರ ಬಾಳನ್ನು ಕಣ್ಮುಂದೆ ನೋಡಲು ಸಾಕಷ್ಟು ಉದಾಹರಣೆಗಳು ಇವೆ.

ಮಹಾವೀರ ಸಂದೇಶಗಳಾದ 'ಬದುಕನ್ನು ಪ್ರೀತಿಸಿ, ತನ್ನಂತೆ ಇತರರನ್ನು ಬದುಕಲು ಬಿಡಿ' ಪರಸ್ಪರ ಉಪಕಾರ ಜೀವನವಿರಲಿ ಇತ್ಯಾದಿ. ಸಾರ್ವಕಾಲಿನ ಸತ್ಯಗಳು ಸರ್ವ ಧರ್ಮಗಳು ಒಪ್ಪುವ ಸಾರವಿದು. ನಮ್ಮೆಲ್ಲರ ಜೀವನದಲ್ಲಿ ಅವರ ಉಪದೇಶ ಅಂಶಿಕವಾಗಿಯಾದರೂ ಪರಿವರ್ತನೆ ಸಹಕಾರಿಯಾಗಲಿ ಎಂದು.

***ಸಾರ್ವಕಾಲಿನ ಪಂಚಶೀಲ ತತ್ವ :***

ಜಗತ್ತಿನ ಎಲ್ಲ ಜೀವಿಗಳೂ ಸಾಮರಸ್ಯದಿಂದ ಬಾಳುವ ಪರಿಸರ ನಿರ್ಮಾಣ ಆಗಬೇಕೆಂಬುದಲ್ಲಿ ಮಹಾವೀರರು ಮನವರಿಕೆ ಮಾಡಿಸಿದ್ದಾರೆ. ಸರ್ವಜೀವಿಗಳೂ ಆತ್ಮೀಯ, ವಾತ್ಸಲ್ಯಮಯಿ ಸಂಬಂಧವನ್ನು ಹೊಂದಿರಬೇಕೆಂದು ಸಾರಿದ ಶ್ರೀ ಮಹಾವೀರರು ಧಾರ್ಮಿಕ ಶ್ರದ್ಧೆ, ಭಕ್ತಿಯೊಂದಿಗೆ ದಿನನಿತ್ಯ ಮಾನವರು ರೂಢಿಸಿಕೊಳ್ಳಬೇಕಾದ ಐದು ಮಹಾವ್ರತಗಳನ್ನು ಸಾರಿರುವರು. ಅವು; ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ ಹಾಗೂ ಅಪರಿಗ್ರಹ.

ಸಂಘರ್ಷವನ್ನು ತೊರೆಯುವಂತೆ ಶ್ರೀಮಹಾವೀರರು ಮಾನವ ಕುಲಕೋಟಿಗೆ ಕರೆ ನೀಡಿದರು. ಇಂದು ಸಹ ಭಾರತ ಮತ್ತು ವಿಶ್ವದೆಲ್ಲೆಡೆ ಅಶಾಂತಿ, ಸಂಘರ್ಷ ಹಾಗೂ ಹಿಂಸಾಚಾರವನ್ನು ತೊರೆಯಲು, ನಿಯಂತ್ರಿಸಲು ಪಂಚ ಶೀಲ ತತ್ವಪಾಲನೆಯಿಂದ ಸಾಧ್ಯವೆಂಬುದನ್ನು ವಿಶ್ವಸಂಸ್ಥೆ ಹಾಗೂ ವಿದೇಶದ ಎಲ್ಲಾ ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರದ ವಿದ್ಯಮಾನವು ಮಾನವ ಕುಲಕೋಟಿಯ ಸಮಗ್ರ, ಸರ್ವಾಂಗೀಣ ಕ್ಷೇಮಾಭ್ಯುದಯಕ್ಕೆ ನಾಂದಿ ಎಂಬ ವಿಚಾರವನ್ನು ಪ್ರಕಟಿಸಿದೆ. ಭಾರತದ ಸರ್ವ ನಾಯಕರೂ ಪಂಚಶೀಲ ತತ್ವಗಳನ್ನಾಧರಿತ ಆಡಳಿತ, ರಾಜಕಾರಣ, ಮಾಡುವುದನ್ನು ಗಮನಿಸಬಹುದು.

ವೈಯಕ್ತಿಕವಾಗಿ ಪಂಚಮಹಾವ್ರತಗಳ ಪಾಲನೆಯಿಂದ ಕುಟುಂಬದ ಹಿತ ಕಾಪಾಡುವಂತಾಗುತ್ತದೆ. ಸಮಾಜದ ಪ್ರತಿಯೊಂದು ಕುಟುಂಬವೂ ಪಂಚಮಹಾವ್ರತಗಳನ್ನು ಅನುಸರಿಸಿದರೆ ರಾಜ್ಯ, ದೇಶವು ಪ್ರಗತಿಪಥದಲ್ಲಿ ಅಭಿವೃದ್ಧಿ ಹೊಂದುವುದನ್ನು ಧನಾತ್ಮಕವಾಗಿ ಕಾಣಬಹುದಾಗಿದೆ. ಸಸ್ಯ-ಪ್ರಾಣಿಗಳಲ್ಲೂ ಜೀವವಿರುವುದರಿಂದ ಪ್ರಕೃತಿಯ ರಕ್ಷಣೆಯ ಸೂಕ್ಷ್ಮ ಅಂಶವನ್ನು ವಿಶ್ವಕ್ಕೆ ಬೋಧಿಸಿದರು.

ಶ್ರೀ ಮಹಾವೀರರ ಕಾಲದಲ್ಲೇ ಗಣರಾಜ್ಯ ವ್ಯವಸ್ಥೆಯೊಂದಿಗೆ ಪ್ರಾರಂಭವಾದ ಸಾಂಸ್ಥಿಕ ಆಡಳಿತ, ಸಾಮರಸ್ಯದ ಉದ್ದೇಶ ಹೊಂದಿರುವುದು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯ ನಾಂದಿ ಎನ್ನುವ ಅಂಶ ಗಮನಿಸಬೇಕಾಗಿದೆ. ಜಾತಿ-ವಿಜಾತಿ ವೈಮನಸ್ಸು ತೊರೆದು, ಮೇಳು-ಕೀಳು ಭಾವ ಕಳಚಿ, ಸರ್ವರೂ ಸಮಾನರು ಎಂಬ ಮಾನವೀಯ ಮೌಲ್ಯದ ಧರ್ಮ ಸಂದೇಶವು ಎಂದೆಂದಿಗೂ ಪ್ರಸ್ತುತ, ಅನುಕರಣೀಯವಾದುದು.

(ಕೃಪೆ : ವಿಜಯ ಕರ್ನಾಟಕ) ○

### ಶ್ರೀವಾಣಿ

ಸರ್ಕಾರದ ವಾಹನಗಳು, ಸರ್ಕಾರದ ಇಂಧನ ಯಥೇಚ್ಛವಾಗಿ ಖರ್ಚಾಗುತ್ತಿದೆ. ಇಂದು ಅಧಿಕಾರಿಗಳು, ರಾಜಕಾರಣಿಗಳು ತಮ್ಮ ಸ್ವಂತ ಕೆಲಸಕ್ಕೂ ಸರ್ಕಾರದ ವಾಹನ ಉಪಯೋಗಿಸುತ್ತಿರುವುದು ದುರದೃಷ್ಟಕರ. ಹಿಂದೆ ಎಂಥ ಪ್ರಾಮಾಣಿಕತೆ ಇತ್ತು, ಎಂಥ ಕರ್ತವ್ಯ ಪ್ರಜ್ಞೆ ಇತ್ತು; ಎಂಥ ರಾಷ್ಟ್ರಪ್ರೇಮ ಇತ್ತು ಎಂಬ ವಿಚಾರವನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳಬೇಕು. ಇದೆಲ್ಲವನ್ನು ಚಾಣಕ್ಯನನ್ನು ನೋಡಿ ಕಲಿಯಬೇಕು. ಅವನು ಇಡೀ ರಾಷ್ಟ್ರಕ್ಕೆ ಮಾದರಿಯಾಗಿದ್ದನು. ಅವನು ಒಂದು ಸಾಧಾರಣ ಮನೆಯಲ್ಲಿ ವಾಸಮಾಡುತ್ತಿದ್ದ. ಚಾಪೆ ಬಿಟ್ಟರೆ ಮತ್ತೊಂದಿರಲಿಲ್ಲ. ಅವನು ಎಷ್ಟರ ಮಟ್ಟಿಗೆ ಆಳ್ವಿಕೆ ಮಾಡುತ್ತಾ ಇದ್ದ ; ಎಷ್ಟು ವಿಚಾರವಂತನಾಗಿದ್ದ, ಪ್ರಾಮಾಣಿಕನಾಗಿದ್ದ, ಎಷ್ಟು ಸರಳ ಜೀವನ ನಡೆಸುತ್ತಿದ್ದ ಎಂಬುದನ್ನು ತಿಳಿದು ನಡೆಯಬೇಕು.







## ಆದಿ ಶಂಕರಾಚಾರ್ಯರು

– ರವಿಶಂಕರ್ *

**ಸ**ನಾತನ ಭಾರತೀಯ ಧರ್ಮತತ್ತ್ವ ಸಂದೇಶಗಳನ್ನು ಜನಮಾನಸದಲ್ಲಿ ಉಳಿಸಿ ಬೆಳೆಸುವುದರ ಮೂಲಕ ಅದ್ವೈತ ತತ್ತ್ವಸಾರವನ್ನು ದೇಶಾದ್ಯಂತ ಪ್ರಸರಿಸಿದವರು ಜಗತ್ತಿನ ಶ್ರೇಷ್ಠ ತತ್ತ್ವಜ್ಞಾನಿಗಳಾದ ಪರಮಪೂಜ್ಯ ಶ್ರೀ ಜಗದ್ಗುರು ಆದಿಶಂಕರಾಚಾರ್ಯರು. ಒಂದು ಅರ್ಥಪೂರ್ಣ ಸುಸಂಸ್ಕೃತಿಯ ಮತ್ತು ಆಧ್ಯಾತ್ಮಪೂರ್ಣ ಲೋಕವನ್ನು ಈ ಇಳೆಯೊಳಗೆ ಮರು ಸೃಷ್ಟಿಸಿದ ಕೀರ್ತಿ ಅವರದು. ಭಾರತೀಯ ದಾರ್ಶನಿಕ ಲೋಕದ ಮೇರು ಶಿಖರ ಎನಿಸಿಕೊಂಡಿರುವ ಅವರು ಪ್ರಸ್ಥಾನತ್ರಯಗಳಾದ ಭಗವದ್ಗೀತೆ - ಬ್ರಹ್ಮಸೂತ್ರ ಹಾಗೂ ಉಪನಿಷತ್ತುಗಳಿಗೆ ವೈಚಾರಿಕ ಚಿಂತನೆಯ ಭಾಷ್ಯ ಬರೆದು ನಮ್ಮ ಸನಾತನ ಭಾರತೀಯ ಸಂಸ್ಕೃತಿಯ ತತ್ತ್ವ ಸಂದೇಶಗಳನ್ನು ವಿಶ್ವದೆತ್ತರಕ್ಕೆ ಕೊಂಡೊಯ್ದ ಯುಗ ಪುರುಷರೆನಿಸಿಕೊಂಡಿದ್ದಾರೆ. ಜ್ಞಾನ ಮತ್ತು ಭಕ್ತಿಯ ಸರಳ ಮಾರ್ಗಸೂತ್ರದ ಸಂದೇಶಗಳನ್ನು ಲೋಕಕ್ಕೆ ಅನುಗ್ರಹಿಸುವುದರ ಮೂಲಕ ಅವರು ಲೋಕದೊಳಗೆ ಜ್ಞಾನ ಮತ್ತು ಭಕ್ತಿಯ ಅಮೃತ ತತ್ತ್ವವನ್ನು ಜಾಗೃತಿಸಿ ಬೆಳಗಿಸಿದ ಪರಮಶ್ರೇಷ್ಠತೆಯ ಸಂತರೆನಿಸಿಕೊಂಡಿದ್ದಾರೆ.

ದೇವರು ಮತ್ತು ಧರ್ಮ ತತ್ತ್ವದ ವಿಚಾರಗಳಲ್ಲಿ ಅಪಾರವಾದ ನಂಬಿಕೆವುಳ್ಳ ಸತ್‌ಸಂಸ್ಕಾರದ ಕುಟುಂಬದೊಳಗೆ ಆದಿಶಂಕರರು ಕ್ರಿ.ಶ. ೭೮೮ರಲ್ಲಿ ಕೇರಳ ರಾಜ್ಯದ ಕಾಲಡಿಯಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಅವರ ಮನಸ್ಸಿನಲ್ಲಿ ಜ್ಞಾನ ಮತ್ತು ಭಕ್ತಿಯ ತತ್ತ್ವ ವಿಚಾರಗಳು ಸಹಜವಾಗಿ ಅರಳಿದ್ದವು. ಅವರ ತಂದೆಯವರಾದ ಶಿವಗುರುಗಳನ್ನು ಬಹುಬೇಗ ಕಳೆದುಕೊಂಡು ತಾಯಿ ಆರ್ಯಾಂಬ ರವರ ವಾತ್ಸಲ್ಯದ ಆಸರೆಯಲ್ಲಿ ಅವರು ಬೆಳೆದರು. ಗುರುಕುಲದಲ್ಲಿ ವೇದಾಂತ ಜ್ಞಾನದ ಪಾಂಡಿತ್ಯವನ್ನು ಏಕಾಗ್ರತೆಯಿಂದ ಗ್ರಹಿಸಿದ ಆದಿಶಂಕರರಿಗೆ ಸನ್ಯಾಸ ದೀಕ್ಷೆ ಪಡೆಯುವ ಅಂತರಾಳದ ಹಂಬಲ ಪ್ರಬಲವಾಗಿತ್ತು. ತಾಯಿ ಮಾತ್ರ ಇದಕ್ಕೆ ಅವಕಾಶ ನೀಡಿರಲಿಲ್ಲ. ವಿಧಿಯ ಒತ್ತಡಕ್ಕೆ ಒಳಗಾಗಿ ತಾಯಿ ಆದಿಶಂಕರರಿಗೆ ಸನ್ಯಾಸ ಸ್ವೀಕರಿಸಲು ಅವಕಾಶ ನೀಡಿದರು.

ಆದಿಶಂಕರರು ತಮ್ಮ ೮ನೇ ವಯಸ್ಸಿನಲ್ಲಿ ಸನ್ಯಾಸ ಪದಗ್ರಹಣ ಸ್ವೀಕರಿಸಿದರು. ಒಬ್ಬ ಯೋಗ್ಯ ಗುರುವಿನ ಅನ್ವೇಷಣೆಯ ನಿಮಿತ್ತ ಅವರು ಉತ್ತರ ಭಾರತದತ್ತ ಹೊರಡುವ ನಿರ್ಧಾರ ಮಾಡಿದರು. ಆ ಸಂದರ್ಭದಲ್ಲಿ ಅವರ ತಾಯಿಯ ಆಶಯದಂತೆ ಅವರು ***"ತಾಯಿ ನಿಮ್ಮ ಅಂತ್ಯಕಾಲದ ಸಂದರ್ಭದಲ್ಲಿ ನಿಮ್ಮ ಬಳಿಯೇ ಇರುವೆ, ನಿಮ್ಮ ಅಂತ್ಯ ಸಂಸ್ಕಾರದ ಕಾರ್ಯವನ್ನು ನಾನೇ ಸ್ವತಃ ಮಾಡುವೆ"*** ಎಂಬ ವಚನ ನೀಡಿದರು. ಅದರಂತೆ ಮುಂದೆ ಅವರು ತಾಯಿಯ ಅಂತ್ಯ ಕಾಲದಲ್ಲಿ ಅವರ ಬಳಿ ಇದ್ದು , ಸ್ವತಃ ಅವರೇ ಅವರ ತಾಯಿಯ ಅಂತ್ಯ ಸಂಸ್ಕಾರ ಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ. ಅವರು ಸಹ ಅಂದು ಸಂಪ್ರದಾಯವಾದಿಗಳ ಕಟು ಟೀಕೆಗೆ ಒಳಗಾಗಿದ್ದರು. ಈ ಒಂದು ಘಟನಾ ಸಂದರ್ಭವನ್ನು ನಾವು ಅವಲೋಕಿಸಿದಾಗ ಆದಿಶಂಕರರಲ್ಲಿದ್ದ ವೈಚಾರಿಕ ಚಿಂತನೆಯ ಒಳನೋಟವನ್ನು ಅರ್ಥ ಮಾಡಿಕೊಳ್ಳಬಹುದು. ತಾಯಿಯ ಮಾತೃಪ್ರೇಮಕ್ಕೆ ಅವರೆಂದೂ ನೋವುಂಟುಮಾಡಲಿಲ್ಲ. ಅಂತಹ ಕೋಮಲ ಮಾತೃ ಹೃದಯ ಆದಿಶಂಕರರದ್ದು.

ಉತ್ತರ ಭಾರತದ ನರ್ಮದಾ ನದಿ ತೀರದತ್ತ ಬಂದ ಆದಿಶಂಕರರಿಗೆ ವೇದಾಂತ ಜ್ಞಾನಿಗಳಾದ ಗೋವಿಂದ ಭಗವತ್ಪಾದರು ಲಭ್ಯರಾಗುತ್ತಾರೆ. ಅವರಿಂದ ಅದ್ವೈತ ವೇದಾಂತ ಸಿದ್ಧಾಂತದ ಉಪದೇಶ ಸ್ವೀಕರಿಸುತ್ತಾರೆ. ಮುಂದೆ ಅವರು ಭಗವದ್ಗೀತೆ - ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳಿಗೆ ವೈಚಾರಿಕ ಚಿಂತನೆಯ ವ್ಯಾಖ್ಯಾನ ಬರೆಯುವ ಮಹತ್ವಪೂರ್ವ ಕಾರ್ಯಗಳನ್ನು ಪೂರ್ಣಗೊಳಿಸುತ್ತಾರೆ. ಆದಿಶಂಕರರ ಅಪಾರ ಜ್ಞಾನ ಪಾಂಡಿತ್ಯವನ್ನು ಕಂಡು ಅಸಂಖ್ಯಾತ ಸಾಧಕ ವರ್ಗದವರು ಅವರನ್ನು ಗುರು ಎಂದು ಸ್ವೀಕರಿಸಿದರು. ಆದಿಶಂಕರರು ತಮ್ಮ ಗುರುಗಳ ಸಂಕಲ್ಪದಂತೆ ಕಾಶಿಯತ್ತ ಪ್ರಯಾಣ ಬೆಳೆಸುತ್ತಾರೆ. ಅಲ್ಲಿ ನಡೆದ ಒಂದು ವಿಲಕ್ಷಣ

* ಶ್ರೀನಿವಾಸ ನಿಲಯ, ಡಿ.ವಿ.ಎಸ್. ಪದವಿಪೂರ್ವ ಕಾಲೇಜು ಹಿಂಭಾಗ, ವಿನೋಬನಗರ, ಶಿವಮೊಗ್ಗ

ಘಟನೆ ಆದಿಶಂಕರರ ಮನಸ್ಸನ್ನು ಸಂಪೂರ್ಣವಾಗಿ ಪರಿವರ್ತಿಸುವುದರ ಮೂಲಕ ಒಂದು ಉದಾತ್ತ ಧರ್ಮಕಾರ್ಯದ ಸಾಧನೆಗೆ ದಿಕ್ಸೂಚಿಯಾಗಿತ್ತು ಎನ್ನಬಹುದು.

ಆದಿಶಂಕರರು ಕಾಶಿಯಲ್ಲಿ ಶಿಷ್ಯರೊಂದಿಗೆ ಹಾದಿಯಲ್ಲಿ ಸಾಗಿ ಬರುವಾಗ ನಾಲ್ಕು ದಿಕ್ಕುಗಳಿಂದಲೂ ನಾಯಿಗಳು ಬರಲಾಗಿ ಹಾದಿಯ ಮಧ್ಯೆ ಒಬ್ಬ ಅಸ್ಪೃಶ್ಯ ಜಾತಿಯ ವ್ಯಕ್ತಿ ನಿಂತಿರುತ್ತಾನೆ. ಹೊರಹೋಗುವಂತೆ ಆ ಅಸ್ಪೃಶ್ಯಜಾತಿ ಯವನಿಗೆ ಆದಿಶಂಕರರು ಹೇಳಿದಾಗ ಆ ಅಸ್ಪೃಶ್ಯಜಾತಿಯವನು ಆದಿಶಂಕರರನ್ನು ಉದ್ದೇಶಿಸಿ "ಸನ್ಯಾಸಿಗಳಾದ ನೀವು ವಿದ್ಯಾರ್ಥಿಗಳಿಗೆ ವೇದಾಂತದ ಅದ್ವೈತ ತತ್ತ್ವಗಳನ್ನು ಬೋಧಿಸುತ್ತೀರಿ ! ಆದರೆ ಅದ್ವೈತ ತತ್ತ್ವಗಳನ್ನು ಸ್ವತಃ ನೀವೇ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎಂಬುದು ನಿಮ್ಮ ನುಡಿಗಳಲ್ಲಿಯೇ ವ್ಯಕ್ತವಾಗುತ್ತಿದೆ. ಜಗತ್ತಿನ ಪ್ರತಿಯೊಂದು ಸ್ಥಳದಲ್ಲಿಯೂ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನು ಓತಪ್ರೋತುಂಬಿರುವಾಗ ಯಾರು ಯಾರಿಗೆ ಎಲ್ಲಿಗೆ ಹೋಗಲು ಹೇಳಲು ಸಾಧ್ಯ! ಯಾರು ಎಲ್ಲಿಗೆ ಹೋಗಲು ಸಾಧ್ಯ? ಬ್ರಾಹ್ಮಣ ಮತ್ತು ನೀಚನಾದ ಶ್ವಪಚನಲ್ಲಿಯೂ ಅಡಗಿರುವ ಪರಮಾತ್ಮ ತತ್ತ್ವ ಒಂದೇ ಅಲ್ಲವೇ? ನಿಮಗೆ ಇಂತಹ ಮಾತು ಸಾಧುವೇ?" ಎಂದು ಹೇಳಿದಾಗ ಆದಿಶಂಕರರು ಆಶ್ಚರ್ಯಚಕಿತರಾದರು. ಕಾಶಿ ವಿಶ್ವನಾಥನೇ ಅಸ್ಪೃಶ್ಯನ ರೂಪದಲ್ಲಿ ನನಗೆ ಯಥಾರ್ಥ ಜ್ಞಾನವನ್ನು ಉಪದೇಶಿಸಿದರು ಎಂದು ಅವರು ಭಾವಿಸಿದರು.

ಧರ್ಮ ಪ್ರಚಾರಾರ್ಥ ಆದಿಶಂಕರರು ತಮ್ಮ ಅಪಾರ ಶಿಷ್ಯರೊಂದಿಗೆ ಸಮಗ್ರ ಭಾರತದ ಯಾತ್ರೆ ಕೈಗೊಂಡರು. ಮೂರು ಬಾರಿ ಕಾಲ್ನಡಿಗೆಯಲ್ಲಿಯೇ ಸಂಚರಿಸಿದ ಅವರ ಧರ್ಮದ ಜೈತ್ರಯಾತ್ರೆ ಭಾರತೀಯ ಇತಿಹಾಸದಲ್ಲಿಯೇ ಒಂದು ಮೈಲಿಗಲ್ಲು. ಧರ್ಮತತ್ತ್ವಗಳನ್ನು ತಪ್ಪಾಗಿ ಅರ್ಥೈಸುವಿಕೆಯ ವಿಚಾರ ಸಂಬಂಧದ ಅಜ್ಞಾನವನ್ನು ಅವರು ಹೋಗಲಾಡಿಸಿದರು. ದೇವರು ಮತ್ತು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಪ್ರಾಣಿ ಹಾಗೂ ನರಬಲಿಗಳನ್ನು ಪ್ರಬಲವಾಗಿ ವಿರೋಧಿಸಿದ ಅವರು ಸಮಾಜದ ಶುದ್ಧೀಕರಣ ಕಾರ್ಯದಲ್ಲಿ ಸಾಗುತ್ತಾರೆ. ಸಮಾಜ ಮತ್ತು ಧರ್ಮವಿರೋಧಿ ಕಾರ್ಯಗಳನ್ನು ಅತ್ಯಂತ ಕಟುವಾಗಿ ಪ್ರತಿಭಟಿಸಿದ ಅವರು ನಮ್ಮ ಸನಾತನ ಧರ್ಮ ಮತ್ತು ಸಂಸ್ಕೃತಿಯ ಮೌಲ್ಯಗಳನ್ನು ಸಂರಕ್ಷಿಸುವ ಕಾರ್ಯದಲ್ಲಿ ಯಶಸ್ಸು ಸಹ ಸಾಧಿಸಿದರು.

ಲೋಕಸಂಚಾರದ ಅವರ ಧರ್ಮ ಪ್ರಸರಣ ಕಾರ್ಯದ ಮಧ್ಯದಲ್ಲಿಯೂ ಅವರು ನೂರಾರು ಸಾಧಕ ವರ್ಗದವರಿಗೆ ಜ್ಞಾನದ ಸನ್ಮಾರ್ಗ ತೋರಿಸಿ ಉದ್ಧರಿಸಿದರು. ಅವರ ಧರ್ಮದ ಪ್ರಸಾರ ಜೈತ್ರಯಾತ್ರೆಯಲ್ಲಿ ಮಂಡನಮಿಶ್ರರ ನಡುವಿನ ಸಂವಾದ ಅತ್ಯಂತ ಚಾರಿತ್ರಾರ್ಹ ದಾಖಲೆ ಎನಿಸಿದೆ. ಅವರ ಜ್ಞಾನದ ಸಂಸ್ಪರ್ಷಕ್ಕೊಳಗಾದ ಮಂಡನಮಿಶ್ರ ಮತ್ತು ಅವರ ಪತ್ನಿ ಆದಿಶಂಕರರ ಶಿಷ್ಯರಾದರು. ಇದು ಆದಿಶಂಕರರ ಜ್ಞಾನದ ಔನ್ನತ್ಯಕ್ಕೊಂದು ಸಾಕ್ಷಿ ಎಂದು ಹೇಳಬಹುದು.

ಗೌಡಪಾದ ಶ್ರೀಗಳಿಂದ ಅಸ್ತಿತ್ವವನ್ನು ಕಂಡುಕೊಂಡಿದ್ದ ಅದ್ವೈತ ಸಿದ್ಧಾಂತ ಆದಿಶಂಕರರ ಕಾಲದಲ್ಲಿ ಹೆಚ್ಚು ಪ್ರಬುದ್ಧಮಾನಕ್ಕೆ ಬಂದಿತು. ಅದ್ವೈತ ಎಂದರೆ ಏಕತ್ವವಾದ ಅಂದರೆ ಎರಡಿಲ್ಲದ್ದು. ಜೀವಾತ್ಮ ಮತ್ತು ಪರಮಾತ್ಮಗಳೆರಡೂ ಒಂದೇ ಎಂಬರ್ಥವನ್ನು ಅದು ನೀಡುತ್ತದೆ. ಜೀವಾತ್ಮ ಪರಮಾತ್ಮನಿಂದ ಭಿನ್ನವಾಗಿ ಕಂಡರೂ ಅವೆರಡೂ ಒಂದೇ ವಿನಹ ಬೇರೆಯಲ್ಲ. ಜೀವಾತ್ಮ ಪರಮಾತ್ಮನ ಅವಿಭಾಜ್ಯ ಅಂಗ ಎಂದು ಅದ್ವೈತ ತಿಳಿಸುತ್ತದೆ. ಅದ್ವೈತ ತತ್ತ್ವದ ಪ್ರಕಾರ ಆದಿಶಂಕರರು "ಅಹಂ ಬ್ರಹ್ಮಾಸ್ಮಿ" ಅಥವಾ "ನಾನೇ ಬ್ರಹ್ಮ ತತ್ತ್ವ" ಎಂಬುದನ್ನು ಉಪದೇಶಿಸಿದರು.

ಯಾವ ರೀತಿ ಕತ್ತಲಲ್ಲಿ ಹಗ್ಗವನ್ನು ಕಂಡು ನಾವು ಹಾವೆಂದು ಭಾವಿಸುತ್ತೇವೆಯೋ ಅದೇ ರೀತಿ ಪರಿವರ್ತನೀಯ ಜಗತ್ತನ್ನು ಸತ್ಯ ಎಂದು ಭಾವಿಸಿದ್ದೇವೆ. ಯಾವ ರೀತಿ ಕಸ್ತೂರಿ ಮೃಗ ತನ್ನೊಳಗಿನ ಕಸ್ತೂರಿಯ ಮಹತ್ವವನ್ನು ಅರಿಯದೆ ಅದನ್ನು ಹೊರಗೆ ಹುಡುಕುವಂತೆ ನಮ್ಮ ಅಂತರಂಗದೊಳಗಿನ ನಿಜವಾದ ಶಾಂತಿ, ಆನಂದಗಳನ್ನು ಹೊರ ಪ್ರಪಂಚದಲ್ಲಿಯೇ ನಾವು ಹುಡುಕುತ್ತಿದ್ದೇವೆ. ಅದು ಸಿಗುವುದಾದರೂ ಹೇಗೆ? ನಮ್ಮ ಅಂತಃಕರಣಗಳಿಗೆ ಆಧಾರವಾಗಿರುವ ಪರಮ ಸತ್ಯ ತತ್ತ್ವದಲ್ಲಿ ಮನಸ್ಸು ತನ್ಮಯಗೊಂಡಾಗ ಮಾತ್ರ ಶುದ್ಧಾತ್ಮ ತತ್ತ್ವದ ಅರಿವಾಗುತ್ತದೆಂದು ಆದಿಶಂಕರರು ಜಗತ್ತಿಗೆ ಅದ್ವೈತ ತತ್ತ್ವದ ಸಾರವನ್ನು ತಿಳಿಸಿದ್ದಾರೆ.

ಜಗತ್ತಿನ ಕಲ್ಯಾಣಾರ್ಥ ಅವರು ರಚಿಸಿದ ನೂರಾರು ಆಧ್ಯಾತ್ಮಪೂರ್ಣ ಸಾಹಿತ್ಯ ಕೃತಿಗಳು ಅವರ ಜ್ಞಾನ ಸಂಪತ್ತಿಗೊಂದು ಸಾಕ್ಷಿ ಎನಿಸಿದೆ. ಕೇವಲ ವ್ಯಾಕರಣ ಗ್ರಂಥಗಳ ಅಭ್ಯಾಸದಲ್ಲಿಯೇ ಕಾಲವನ್ನು ಕಳೆಯುತ್ತಿದ್ದವರನ್ನು ಕಂಡು ರಚಿಸಿದ "ಭಜಗೋವಿಂದಂ" ಕೃತಿ ಅತ್ಯಂತ ವೈಶಿಷ್ಟ್ಯ





ಪೂರ್ಣತೆಯಿಂದ ಕೂಡಿದೆ. ಅದು ಮಾನವನ ಬದುಕಿನ ಪರಮ ಸಾರ್ಥಕತೆಯ ಮಾರ್ಗವನ್ನು ತೋರಿಸುತ್ತದೆ.

*ಭಜಗೋವಿಂದಂ ಭಜಗೋವಿಂದಂ*
*ಗೋವಿಂದಂ ಭಜ ಮೂಢಮತೇ*
*ಸಂಪ್ರಾಪ್ತೇ ಸನ್ನಿಹಿತೇ ಕಾಲೇ*
*ನಹಿ ನಹಿ ರಕ್ಷತಿ ಡುಕೃಂಕರಣೇ ॥*

ಉಪನಿಷತ್ತುಗಳ ಪ್ರಕಾರ ಬ್ರಹ್ಮನೇ ಗೋವಿಂದ, ಅವನೇ ಪರಮಸತ್ಯನಾದ ಪರಮಾತ್ಮ. ಭಜಗೋವಿಂದಂ ಎಂದರೆ ನಮ್ಮ ಅಂತರಂಗದೊಳಗೆ ಪರಮಾತ್ಮನನ್ನು ಕಾಣು ಎಂದರ್ಥ. ವ್ಯಾಕರಣದ ಬೆನ್ನತ್ತಿ ಕಾಲ ವ್ಯರ್ಥ ಮಾಡಿಕೊಳ್ಳಬೇಡ ಎಂದು ಭಜಗೋವಿಂದಂ ತಿಳಿಸುತ್ತದೆ. ಪರಮಾತ್ಮನ ಪರಮ ಸಾಕ್ಷಾತ್ಕಾರಕ್ಕೆ ಸಹಕಾರಿಯಲ್ಲದ ಬರಿಯ ಪ್ರಾಪಂಚಿಕ ತಿಳುವಳಿಕೆಗಾಗಿ, ಲೌಕಿಕ ಸಂಪತ್ತಿಗಾಗಿ, ಕೀರ್ತಿಗಾಗಿ ಹಾಗೂ ಕ್ಷಣಿಕ ಸುಖಕ್ಕಾಗಿ ನಾವು ನಮ್ಮ ಸಮಯವನ್ನು ವ್ಯರ್ಥಮಾಡಿಕೊಳ್ಳಬಾರದು ಎಂದು ತಿಳಿಸುವ ಆದಿಶಂಕರರ 'ಭಜಗೋವಿಂದಂ' ಬದುಕಿನ ಪರಮ ಸಾರ್ಥಕತೆಗಾಗಿ ನಾವು ನಮ್ಮ ಕಾಲವನ್ನು ಹರಸಿ ಬದುಕನ್ನು ಪಾವನೀಕರಿಸಿ ಕೊಳ್ಳಬೇಕೆಂದು ತಿಳಿಸುತ್ತದೆ.

ಹಿಂದೂ ಧರ್ಮದ ತತ್ತ್ವ ಪ್ರಸರಣ ಕಾರ್ಯದೊಂದಿಗೆ ಜನಸಾಮಾನ್ಯರ ಬದುಕಿನಲ್ಲಿ ಧರ್ಮ ತತ್ತ್ವಗಳು ಸ್ಥಾಯಿಯಾಗಿ ಉಳಿಯುವ ಸದುದ್ದೇಶದಿಂದ ಆದಿಶಂಕರರು ಭಾರತದ ೪ ಪ್ರಮುಖ ಸ್ಥಳಗಳಲ್ಲಿ ಅಂದರೆ ಕರ್ನಾಟಕದ ಶೃಂಗೇರಿ, ಒರಿಸ್ಸಾದ ಪುರಿ ಬಳಿ ಗೋವರ್ಧನ ಪೀಠ, ಉತ್ತರಾಂಚಲದ ಬದರಿ ಬಳಿ ಜ್ಯೋತಿರ್ಮಠ ಮತ್ತು ಗುಜರಾತಿನ ದ್ವಾರಕೆ ಬಳಿ ಕಾಳಿಕಾ ಮಠಗಳನ್ನು ಸ್ಥಾಪಿಸಿದರು. ದೇಶದಲ್ಲಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ತತ್ತ್ವಗಳ ಏಕತೆಯ ಸಂದೇಶ ತತ್ತ್ವವನ್ನು ಅವರು ಸಾರಿದರು. ಜನಸಾಮಾನ್ಯರ ಬದುಕಿನಿಂದ ಧರ್ಮತತ್ತ್ವಗಳು ದೂರಸರಿಯಬಾರದೆಂಬ ದಿವ್ಯ ಉದ್ದೇಶ ಈ ಮಠಗಳ ಸ್ಥಾಪನೆಯದ್ದಾಗಿತ್ತು. ಅವರ ಈ ದೂರದೃಷ್ಟಿಯ ಚಿಂತನೆಯ ಫಲದಿಂದ ನಾವಿಂದು ಧರ್ಮದ ಚಲನಶೀಲತೆಯ ಜನಪರ ಕಾಳಜಿಯ ಮುಖ್ಯ ಕಾರ್ಯಗಳನ್ನು ಈ ಮಠಗಳಿಂದ ಕಾಣಲು ಸಕಾರಣವಾಗಿದೆ ಎನ್ನಬಹುದು.

ಸಮಾಜದಲ್ಲಿ ಧರ್ಮತತ್ತ್ವಗಳು ಅನುಷ್ಠಾನರೂಪದಲ್ಲಿ ವ್ಯಕ್ತವಾಗುವ ದಿವ್ಯ ಕಾರಣಕ್ಕಾಗಿ ಬಾಳಿ ಬದುಕಿದ ಆದಿಶಂಕರಾಚಾರ್ಯರು ಮಾನವ ಬದುಕಿನ ಪರಮ ಸಾರ್ಥಕತೆಗೆ ಅಗತ್ಯವಾದ ಎಲ್ಲಾ ತತ್ತ್ವಸಂದೇಶಗಳನ್ನು ನೀಡಿ ಹರಸಿದ್ದಾರೆ. ಅದ್ವೈತ ಸಿದ್ಧಾಂತದ ಮೂಲಕ ಜಗತ್ತನ್ನು ಸಮನ್ವಯಿಸುವ ಅರ್ಥಾತ್ ಭ್ರಾತೃತ್ವ ಭಾವದಿಂದ ಬಂಧಿಸುವ ಕಾರ್ಯ ಮಾಡಿದ್ದಾರೆ. ಅವರ ಅವಿಶ್ರಾಂತ ಧರ್ಮಪ್ರಚಾರ ಕಾರ್ಯದ ನಡುವೆಯೇ ಅಂದರೆ ಕ್ರಿ.ಶ. ೮೨೦ರಲ್ಲಿ ಅವರು ಬ್ರಹ್ಮನಲ್ಲಿ ಐಕ್ಯಗೊಂಡರು. ಭಾರತೀಯ ತತ್ತ್ವಶಾಸ್ತ್ರಗಳ ಇತಿಹಾಸದಲಿ ಆದಿಶಂಕರಾಚಾರ್ಯರ ಸಂದೇಶ ಮತ್ತು ಬದುಕಿನ ಸಾಧನೆಯ ಹೆಜ್ಜೆಗುರುತುಗಳು ಸದಾ ಹಸಿರು ಹಾಗೂ ಜಗತ್ತಿಗೆ ಸದಾ ಆದರ್ಶ ಎನ್ನಬಹುದು.

○

ಧರ್ಮ ಎನ್ನುವುದು ತನ್ನ ಅಂತರಂಗ ಬಹಿರಂಗವನ್ನು ತಿದ್ದಿಕೊಳ್ಳುವ ಸಾಧನ. ನಿಜವಾದ ಮನುಷ್ಯನಾಗಿರಬೇಕೆನ್ನುವವನು ಮಾನವಧರ್ಮ ಕಾಪಾಡಿಕೊಳ್ಳಬೇಕು. "ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ ; ಇದೇ ಬಹಿರಂಗ ಶುದ್ಧಿ" ಎಷ್ಟು ಒಳ್ಳೆಯ ಮಾತು. ಒಟ್ಟಿನಲ್ಲಿ ಇವತ್ತು ಜಗತ್ತಿನಲ್ಲಿ ಉಂಟಾಗಿರುವ ಅಲ್ಲೋಲ ಕಲ್ಲೋಲ ಗಳಿಗೆ ಅಜ್ಞಾನವೇ ಕಾರಣ. ತನ್ನ ಕರ್ತವ್ಯವ ಜವಾಬ್ದಾರಿ ಅರಿತುಕೊಂಡು ಪರಸ್ಪರ ಪ್ರೀತಿ, ವಿಶ್ವಾಸ, ಪ್ರೇಮವೇ ಜೀವನದ ಆದರ್ಶ ಎಂದು ಭಾವಿಸಿ ಜೀವನ ನಡೆಸಬೇಕು . ಈ ವಿಚಾರವನ್ನು ಅರಿತುಕೊಂಡರೆ, ವ್ಯ - ವ್ಯ ಗಳ ನಡುವೆ, ಸಮಾಜಗಳ ನಡುವೆ ಜಗಳವಿರುವುದಿಲ್ಲ. ಇವತ್ತು ಮನುಷ್ಯ ಸ್ವಾರ್ಥಿಯಾಗಿ ಎಲ್ಲವನ್ನೂ ಮರೆತ್ತಿದ್ದಾನೆ. ಮಾಡಬಾರದ ಕಾರ್ಯ ಮಾಡುತ್ತಿದ್ದಾನೆ.

– ಶ್ರೀವಾಣಿ

# ಕರ್ನಾಟಕದಲ್ಲಿ ರಾಮಾನುಜರು

– [illegible] ಅಯ[illegible]

**ಕಾ**ರ್ಯಕಾರಣ ಪ್ರಯುಕ್ತ ಕರ್ನಾಟಕಕ್ಕೆ ಆಗಮಿಸಿದ ರಾಮಾನುಜರು (ಏಪ್ರಿಲ್ ೨೧ರಂದು ಜಯಂತಿ) ಇಲ್ಲಿನ ಆಧ್ಯಾತ್ಮಿಕ ಔನ್ನತ್ಯಕ್ಕೆ ತಮ್ಮದೇ ಕೊಡುಗೆ ನೀಡಿದ್ದಾರೆ. ಪಂಚ ನಾರಾಯಣ ದೇಗುಲಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ.

ಮಹಾವಿದ್ವಾಂಸ ಕೇಶವ ದೀಕ್ಷಿತ ಮತ್ತು ಕಾಂತಿಮತಿ ದೇವಿಯ ದಂಪತಿಯ ಪುತ್ರರಾಗಿ ಶ್ರೀ ಪೆರಂಬದೂರಿನಲ್ಲಿ ಜನಿಸಿದರು ಶ್ರೀ ರಾಮಾನುಜರು. ಬಾಲ್ಯದಿಂದಲೂ ಈ ಮಗುವಿನ ಅಪಾರ ಭಗವದ್ಭಕ್ತಿ. ಪ್ರಖರ ತೇಜವನ್ನು ಗಮನಿಸಿದ ಹಿರಿಯರು ಶ್ರೀರಾಮನ ಅನುಜನಾದ ಲಕ್ಷ್ಮಣನೇ ಅವತರಿಸಿರುವನೆಂದು 'ರಾಮಾನುಜ' ಎಂದೇ ಅಭಿದಾನ ನೀಡಿದರು.

ಬಾಲ್ಯದಿಂದಲೂ ಮೇಲು ಕೀಳೆಂಬ ಜಾತಿಪದ್ಧತಿಯನ್ನು ಮೀರಿ, ಅಂತ್ಯಜರೆನ್ನಿಸಿದ ಪರಮ ಭಾಗವತರಾದ ಶ್ರೀ ಕಾಂಚೀ ಪೂರ್ಣರ ಶಿಷ್ಯರಾಗಿ ರಾಮಾನುಜರು ಜ್ಞಾನ ಸಂಪಾದಿಸಿದರು. ಮಹಾಮುನಿ, ವಿಶಿಷ್ಟಾದ್ವೈವ ಪ್ರತಿಪಾದಕ ಯಾಮುನಾಚಾರ್ಯರ ಕಳೇಬರದ ದರ್ಶನ ಸಂದರ್ಭವು ರಾಮಾನುಜರ ಜೀವನದಲ್ಲಿ ಒಂದು ತಿರುವು. ಯಾಮುನಾಚಾರ್ಯರು ನೆರವೇರಿಸ ಬಯಸಿದ್ದ ಮೂರು ಪ್ರತಿಜ್ಞೆಗಳನ್ನು ಲೋಕಕಲ್ಯಾಣಾರ್ಥವಾಗಿ ತಾವು ನೆರವೇರಿಸುವುದಾಗಿ ರಾಮಾನುಜರು ಪ್ರತಿಜ್ಞೆ ಮಾಡುತ್ತಾರೆ. ಅದರಂತೆ, ಆಜೀವಪರ್ಯಂತ ವಿಶಿಷ್ಟಾದ್ವೈತ ಪ್ರತಿಪಾದಕರಾಗಿ, 'ಪಂಚ ಸಂಸ್ಕಾರ'ವೆಂಬ ವೈಜ್ಞಾನಿಕ ವಿಧಿ ವಿಧಾನಗಳಿಂದ ಹಾಗೂ 'ಶ್ರೀಬಾಷ್ಯ', ರಚನೆಯಿಂದ, ಮಹರ್ಷಿ ಪರಾಶರರು ರಚಿಸಿದ 'ಶ್ರೀವಿಷ್ಣು ಪುರಾಣ'ದಲ್ಲಿ ಉಲ್ಲೇಖಿತವಾಗಿರುವ ಈಶ್ವರ, ಜೀವ ಹಾಗೂ ಜಗತ್ತುಗಳ ಸೂಕ್ಷ್ಮ ಸಂಬಂಧಗಳನ್ನು ಸರಳವಾಗಿ ಪ್ರತಿಪಾದಿಸಿ ತಾವು ಗುರುವೆಂದು ಮನಸಾ ಸ್ವೀಕರಿಸಿದ ಯಾಮುನಾಚಾರ್ಯರ ಅಂತಿಮ ಆಶಯವನ್ನು ನೆರವೇರಿಸುತ್ತಾರೆ; ಅವರ ಸ್ಥಾನವನ್ನು ಅಲಂಕರಿಸಿ ವಿಶಿಷ್ಟಾದ್ವೈತ ಪ್ರತಿಷ್ಠಾಪನಾಚಾರ್ಯರಾಗುತ್ತಾರೆ.

ತಮಿಳು ವೇದಗಳೆಂದೇ ಪ್ರಸಿದ್ಧವಾದ ನಾಲ್ಕು ಸಾವಿರ ದಿವ್ಯ ಪ್ರಬಂಧಗಳನ್ನು ರಾಮಾನುಜರು ಅಧ್ಯಯನ ಮಾಡುತ್ತಾರೆ. ಪತ್ನಿಯ [illegible]ಗೆ ಸ[illegible] ಯಾಮುನರಿಗೆ ನೀಡಿದ ವಚನದಂತೆ ತಮ್ಮನ್ನು ಸಮಾಜಸೇವೆಗೆ ಅರ್ಪಿಸಿಕೊಳ್ಳಲು ಶ್ರೀ ವರದರಾಜ ಸನ್ನಿಧಿಯಲ್ಲಿ ಸನ್ಯಾಸ ಸ್ವೀಕರಿಸುತ್ತಾರೆ.

ಜ್ಞಾನಿಯಾದ ಗೋಷ್ಠೀಪೂರ್ಣರಿಂದ ಪರಮರಹಸ್ಯವಾದ ಮಂತ್ರವನ್ನು ಸಂಗ್ರಹಿಸಬೇಕೆಂಬ ಸದಿಚ್ಛೆಯಿಂದ ರಾಮಾನುಜರು ಅವರನ್ನು ಸಂಪರ್ಕಿಸಲು ಯತ್ನಿಸುತ್ತಾರೆ. ಹದಿನೆಂಟು ಬಾರಿ ಯತ್ನಿಸಿದರೂ ಸಂಪರ್ಕಿಸಲು ಸಾಧ್ಯವಾಗದೆ ಕೊನೆಗೆ ಅವರಿಗೆ ಮೋಕ್ಷಪ್ರದ, ಸರ್ವದುಃಖ ನಿವಾರಕ ಮಂತ್ರದ ಉಪದೇಶವಾಗುತ್ತದೆ. ಗುರುವಿನಾಜ್ಞೆ ಮೀರಿ ತಾವು ನರಕಕ್ಕೆ ಹೋದರೂ ಸರಿ, ಇಂತಹ ಅಪೂರ್ವ ಮಂತ್ರ ಜನರಿಗೆ ಲಭಿಸಬೇಕೆಂಬ ಇಚ್ಛೆಯಿಂದ ತಿರುಕೊಟ್ಟಿಯೂರಿನ ಶ್ರೀ ಲಕ್ಷ್ಮೀನರಸಿಂಹ ದೇಗುಲದ ಗೋಪುರವನ್ನೇರಿ, ಅಲ್ಲಿ ಸೇರಿದ್ದ ಸಾವಿರಾರು ಸಮಾಜ ಬಾಂಧವರಿಗೆ ಪವಿತ್ರ ಮಂತ್ರವನ್ನು ಉಪದೇಶಿಸುತ್ತಾರೆ. ಇದಕ್ಕಾಗಿ ಗೋಷ್ಠೀಪೂರ್ಣರು ಮೊದಲು ಕೋಪಿಸಿಕೊಂಡರೂ, ನಂತರ ಇದರಿಂದ ಮಾನವ ಜನಾಂಗದ ಒಳಿತನ್ನು ಗಮನಿಸಿ ರಾಮಾನುಜರ ಶಿಷ್ಯರಾಗಲು ಇಚ್ಛಿಸುತ್ತಾರೆ.

ಆ ವೇಳೆಗೆ ತಮಿಳುನಾಡಿನಲ್ಲೆಲ್ಲಾ ಭಗವಾನ್ ಶೀ ಮನ್ನಾರಾಯಣರ ಭಕ್ತಿಪಂಥವಾದ ವಿಶಿಷ್ಟಾದ್ವೈತವು ಪ್ರಭಾವಿಯಾಗಿ ಜನಜನಿತವಾಗಿತ್ತು. ಇದನ್ನು ಸಹಿಸದ ಕೆಲ ಶೈವರು ಚೋಳ ದೇಶದ ರಾಜನಾದ ರಾಜೇಂದ್ರಚೋಳನನ್ನು ಹುರಿದುಂಬಿಸಿ, 'ವೈಷ್ಣವಧರ್ಮ ಪ್ರವರ್ತಕ ರಾಮಾನುಜರನ್ನೇ ಶೈವರಾಗಿ ಪರಿವರ್ತಿಸಿದರೆ ರಾಜ್ಯವೆಲ್ಲ ಶಿವಮಯವಾಗುವುದು' ಎಂದು ಬೋಧಿಸಿದರು. ಅದರಂತೆ, ರಾಜನು ರಾಮಾನುಜರನ್ನು ಕರೆತರಲು ಭಟರನ್ನು ಕಳುಹಿಸುತ್ತಾನೆ. ಈ ವಿಷಯ ತಿಳಿದ ಶಿಷ್ಯ ಕೂರೇಶರು ತಮ್ಮ ಶ್ವೇತ ವಸ್ತ್ರವನ್ನು ರಾಮಾನುಜರಿಗೆ ಕೊಟ್ಟು, ಅವರ ಕಾಷಾಯ ವಸ್ತ್ರವನ್ನು ತಾವು ಧರಿಸಿ ಭಟರೊಡನೆ ರಾಜಸ್ಥಾನಕ್ಕೆ ಬರುತ್ತಾರೆ. ಇವರನ್ನೇ ರಾಮಾನುಜರೆಂದು ತಿಳಿದ ರಾಜ, ಶೈವರಾಗಲು ಬಲವಂತ ಮಾಡುತ್ತಾನೆ. ಒಪ್ಪದಿದ್ದಾಗ ಅವರ ಕಣ್ಣುಗಳನ್ನು

* ಲೇಖಕರು ಯೋಗಮುದ್ರಾತಜ್ಞರು ಮತ್ತು ಗ್ರಂಥಕರ್ತರು.





ಕೀಳಿಸುತ್ತಾನೆ. ಕೂರೇಶರು ಗುರುವಿಗೆ ತಕ್ಕ ಶಿಷ್ಯರಾಗಿ ಎಲ್ಲರಿಗೂ ಒಳ್ಳೆಯದಾಗಲೆಂದೇ ಹರಸುತ್ತಾರೆ.

ರಾಜನ ಭಟರಿಂದ ತಪ್ಪಿಸಿಕೊಂಡ ರಾಮಾನುಜರು ತಮ್ಮ ಹಲವು ಆತ್ಮೀಯ ಶಿಷ್ಯರೊಂದಿಗೆ ಹೊರಡುತ್ತಾರೆ. ಕರ್ನಾಟಕದಲ್ಲಿ ಹೊಯ್ಸಳ ಸಾಮ್ರಾಜ್ಯದ ಅರಸು ವಿಠ್ಠಲದೇವ ಯಾ ಬಿಟ್ಟಿದೇವ ಜೈನಮತೀಯನಾಗಿದ್ದರೂ, ಸಕಲ ಧರ್ಮಗಳಿಗೆ ಆಶ್ರಯದಾತನಾಗಿರುವ ವಿಚಾರ ತಿಳಿದು ಕಾವೇರಿ ನದಿಗುಂಟ ಬಂದು ನೀಲಗಿರಿಯನ್ನು ಹಾದು ರಾಮಾನುಜರು ಕರ್ನಾಟಕವನ್ನು ಪ್ರವೇಶಿಸುತ್ತಾನೆ. ಶ್ರೀರಂಗ ನಾಥನ ಸನ್ನಿಧಿ ಶ್ರೀರಂಗಪಟ್ಟದಲ್ಲಿದ್ದು ವಿಶಿಷ್ಟಾದ್ವೈತವನ್ನು ಪ್ರಚಾರ ಮಾಡುತ್ತಾರೆ. ಅನೇಕರು ತಮಗೆ ಹೊಸದಾದ, ಸರಳವಾದ ಶ್ರೀ ವೈಷ್ಣವ ಧರ್ಮಕ್ಕೆ ಮನಸೋಲುತ್ತಾರೆ.

ರಾಜ ವಿಠ್ಠಲದೇವನು ರಾಮಾನುಜರನ್ನು ಸತ್ಕರಿಸುತ್ತಾನೆ. ರಾಮಾನುಜರು ಇಂದು ಸಾಲಿಗ್ರಾಮವೆಂದು ಕರೆಯಲ್ಪಡುವ ಗ್ರಾಮದ ಲಕ್ಷ್ಮೀನರಸಿಂಹ ದೇಗುಲದಲ್ಲಿ ತಂಗಿದ್ದರು. ಇವರ ಹೊಸ ಧರ್ಮದ ಬಗ್ಗೆ ತಿಳಿಯಲು, ವಾಗ್ವಾದ ಮಾಡಲು ಆ ಪ್ರದೇಶದ ಅನೇಕ ಜೈನ ವಿದ್ವಾಂಸರು ಬರುತ್ತಾರೆ. ಸ್ಥಾನೀಯ ಇತಿಹಾಸದಲ್ಲಿ ದಾಖಲಾಗಿರುವಂತೆ, ಆಗ ರಾಮಾನುಜರು ಪ್ರಾಕಾರದ ಎರಡು ಕಂಬಗಳಿಗೆ ತೆರೆಯೋಪಾದಿಯಲ್ಲಿ ತಮ್ಮ ಕಾಷಾಯ ವಸ್ತ್ರವನ್ನು ಕಟ್ಟುತ್ತಾರೆ., ತೆರೆಯ ಹಿಂದೆ ತಮ್ಮ ಮೂಲ ಶೇಷಾವತಾರವನ್ನು ತಾಳಿ, ಮುಂದೆ ಸೇರಿದ ನೂರಾರು ಜೈನ ವಿದ್ವಾಂಸರ ವಿದ್ವತ್ಪೂರ್ಣ, ವೈವಿಧ್ಯಮಯ ಪ್ರಶ್ನೆಗಳನ್ನು ಏಕಕಾಲದಲ್ಲಿ ಕೇಳಿ, ಎಲ್ಲರಿಗೂ ಸಮರ್ಪಕ ಉತ್ತರ ನೀಡುತ್ತಾರೆ. ಆ ಪದ್ಧತಿಯೇ ಅಷ್ಟಾವಧಾನ, ಅಂದರೆ ಎಂಟು ಮಂದಿ ಏಕಕಾಲದಲ್ಲಿ ಕೇಳುವ ಪ್ರಶ್ನೆಗಳಿಗೆ ಉತ್ತರಿಸುವುದು. ಹಾಗೂ, ಶತಾವಧಾನ ಅಂದರೆ, ನೂರಾರು ವಿದ್ವಾಂಸರು ಒಂದೇ ಬಾರಿಗೆ ಕೇಳುವ ಪ್ರಶ್ನೆಗಳೆಲ್ಲವನ್ನೂ ಮನನ ಮಾಡಿಕೊಂಡು, ಒಂದೊಂದಕ್ಕೂ ಸಮರ್ಪಕವಾಗಿ ಉತ್ತರಿಸುವ ವಿಧಾನ. ಇದು ಬಹುಶಃ ರಾಮಾನುಜರಿಂದ ಕರ್ನಾಟಕದಲ್ಲಿ ಪ್ರಚಲಿತವಾಯಿತೆಂದು ಭಾವಿಸಬಹುದಾಗಿದೆ.

ರಾಜ ಬಿಟ್ಟಿದೇವನೆಂದು ಯುದ್ಧದಲ್ಲಿ ತನ್ನದೊಂದು ಬೆರಳನ್ನು ಕಳೆದುಕೊಂಡಿದ್ದ. ಹಾಗಾಗಿ 'ಬೆರಳು ಬಿಟ್ಟ ದೇವ', 'ಬೆರಳು ಕಳೆದುಕೊಂಡ. ಊನವಾದ ದೇಹದವನೆಂದು ಜೈನ ವಿದ್ವಾಂಸ ವಲಯದಲ್ಲಿ ರಾಜನಿಗೆ ಪೂರ್ಣ ಮರ್ಯಾದೆ ಸಲ್ಲುತ್ತಿರಲಿಲ್ಲ. ಈ ಕೊರಗು ಆತನನ್ನು ಕಾಡುತ್ತಿತ್ತು. ಆದರೆ ರಾಮಾನುಜರು ವಿಶ್ವಾಸ, ಪ್ರೀತಿಯಿಂದ ರಾಜನೊಂದಿಗೆ ವ್ಯವಹರಿಸಿದರು. ಮುಖ್ಯವಾಗಿ ರಾಜನ ಮಗಳಿಗೆ ಹಿಡಿದಿದ್ದ ಪಿಶಾಚಿಯನ್ನು ತೊಲಗಿಸುತ್ತಾರೆ. ರಾಜನು ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸುತ್ತಾನೆ. ರಾಮಾನುಜರು ರಾಜನಿಗೆ 'ವಿಷ್ಣುವರ್ಧನ' ಎಂಬ ನೂತನ ನಾಮಧೇಯ ನೀಡುತ್ತಾರೆ.

ರಾಮಾನುಜರು ನಾಡಿನಲ್ಲಿ ಅನೇಕ ಕಾರ್ಯಗಳನ್ನು ಕೈಗೊಳ್ಳುತ್ತಾರೆ. ತೊಂಡನೂರಿನಲ್ಲಿ ಶಿಥಿಲವಾಗಿದ್ದ ಲಕ್ಷ್ಮೀನರಸಿಂಹ ದೇವಾಲಯವನ್ನು ಮತ್ತು ಬೇಲೂರು ಚೆನ್ನಕೇಶವ ದೇಗುಲಗಳನ್ನು ಕಲಾ ಪೂರ್ಣವಾಗುವಂತೆ ಜೀರ್ಣೋದ್ಧಾರಗೊಳಿಸಿದರು. ಯದುಗಿರಿ ಎಂಬ ಸ್ಥಳದಲ್ಲಿ ತಾನು ಇರುವುದಾಗಿ ಶ್ರೀ ಮನ್ನಾರಾಯಣನು ಹೇಳಿದಂತೆ ಆಚಾರ್ಯರಿಗೆ ಸ್ವಪ್ನವಾಗುತ್ತದೆ. ಆ ಸ್ಥಾನವನ್ನು ರಾಜನೊಂದಿಗೆ ತಲುಪುತ್ತಾರೆ. ಅಲ್ಲಿಯ ಪುಷ್ಕರಣಿಯ ಬಳಿಯ ಹುತ್ತದಲ್ಲಿ ಭಗವಂತನ ಮೂರ್ತಿ ಸಿಗುತ್ತದೆ. ಅಲ್ಲಿಯೇ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಆದರೆ ದೇಗುಲದಲ್ಲಿ ಉತ್ಸವಮೂರ್ತಿಯ ಕೊರತೆಯಿತ್ತು. ದೆಹಲಿಯ ಸುಲ್ತಾನನ ಬಳಿ ಇಲ್ಲಿಯ ಉತ್ಸವಮೂರ್ತಿ ಇರುವುದು ರಾಮಾನುಜರಿಗೆ ಸ್ಫುರಣವಾಗುತ್ತದೆ. ನೂರಾರು ಜನರೊಂದಿಗೆ ತೆರಳಿ, ಸುಲ್ತಾನನ ಮಗಳು ಬೀಬಿ ಲಾಚಿಮರ್ ಬಳಿ ಇದ್ದ ಸುಂದರ ವಿಗ್ರಹವನ್ನು ಸಂಗ್ರಹಸಿ ಯದುಗಿರಿಗೆ, ಮೇಲುಕೋಟೆಗೆ ತಂದು ಪ್ರತಿಷ್ಠಾಪಿಸುತ್ತಾರೆ. 'ರಾಮಪ್ರಿಯ' ಎಂಬ ಈ ವಿಗ್ರಹವನ್ನು ಅತ್ಯಂತ ಪ್ರೀತಿಸುತ್ತಿದ್ದ ಬೀಬಿ ಲಾಚಿಮರ್, ಮೂರ್ತಿಯನ್ನು ಅಗಲಿರಲಾರದೆ ಮೇಲುಕೋಟೆಯನ್ನು ಹುಡುಕೊಂಡು ಬಂದು, ತನ್ನ ಅಂತ್ಯದವರೆಗೆ ಮೂರ್ತಿಯನ್ನು ಅರ್ಚಿಸುತ್ತಾಳೆ. ಮಹಮ್ಮದೀಯಳಾದರೂ ಆಕೆಯ ಅನನ್ಯ ಭಕ್ತಿ ಶ್ರದ್ಧೆಯನ್ನು ಗಮನಿಸಿದ ರಾಮಾನುಜರು ಭಗವಂತನ ಸಮೀಪದಲ್ಲೇ ಆಕೆಯ ವಿಗ್ರಹವನ್ನೂ ಸ್ಥಾಪಿಸಿ, 'ಬೀಬಿ ನಾಚ್ಚಿಯಾರ್' ಅಂದರೆ ದೇವನ ಪತ್ನಿ ಎಂದೇ ಪುರಸ್ಕರಿಸಿದರು.

ರಾಮಾನುಜರು ಮೇಲುಕೋಟೆಯನ್ನು ಕಿರುನಾರಾಯಣಪುರ ಎಂದು ಹೆಸರಿಸಿದರು. ತಮಗೆ ಬೆಂಬಲವಾಗಿ ನಿಂತ ಎಲ್ಲ ಅಂತ್ಯಜರನ್ನು ಪುರಸ್ಕರಿಸಿ, 'ಕಿರುಕುಲತ್ತಾರ್' ಎಂದೇ ಸಂಬೋಧಿಸಿ, ಉತ್ಸವ ಕಾಲದ ಮೂರು ದಿನ ದೇವಾಲಯ ಪ್ರವೇಶ, ಅರ್ಚನಾದಿಗಳಿಗೆ ವ್ಯವಸ್ಥೆ ಮಾಡಿದರು. ಹನ್ನೆರಡು ವರ್ಷಗಳ ಕಾಲ ಚೆಲುವನಾರಾಯಣನ ಸನ್ನಿಧಿಯಲ್ಲಿದ್ದ ರಾಮಾನುಜರು, ಕರ್ನಾಟಕದ ವಿವಿಧ ಪ್ರದೇಶಾಗ್ಳಲ್ಲಿ ಐದು ಸರ್ವಾಂಗಸುಂದರ ದೇಗುಲಗಳನ್ನು ಸ್ಥಾಪಿಸಿದರು. ಅವೆಂದರೆ ತೊಂಡನೂರಿನ ನಂಬಿನಾರಾಯಣ, ಗದಗದ ವೀರನಾರಾಯಣ, ಬೇಲೂರಿನ ಚೆನ್ನಿಗನಾರಾಯಣ, ಗುಂಡ್ಲುಪೇಟೆಯ ವಿಜಯನಾರಾಯಣ ಮತ್ತು ತಲಕಾಡಿನ ಕೀರ್ತಿ ನಾರಾಯಣ. ಇವು ಪಂಚನಾರಾಯಣ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

*(ಕೃಪೆ : ಬೋಧಿವೃಕ್ಷ)*

# ಕರ್ನಾಟಕದಲ್ಲಿ ರಾಮಾನುಜರು

– ಅಸೂರಿ ರಂಗರಾಜ ಅಯ್ಯಂಗಾರ್ *

ಕಾರ್ಯಕಾರಣ ಪ್ರಯುಕ್ತ ಕರ್ನಾಟಕಕ್ಕೆ ಆಗಮಿಸಿದ ರಾಮಾನುಜರು (ಏಪ್ರಿಲ್ ೨೫ರಂದು ಜಯಂತಿ) ಇಲ್ಲಿನ ಆಧ್ಯಾತ್ಮಿಕ ಔನ್ನತ್ಯಕ್ಕೆ ತಮ್ಮದೇ ಕೊಡುಗೆ ನೀಡಿದ್ದಾರೆ. ಪಂಚ ನಾರಾಯಣ ದೇಗುಲಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ.

ಮಹಾವಿದ್ವಾಂಸ ಕೇಶವ ದೀಕ್ಷಿತ ಮತ್ತು ಕಾಂತಿಮತಿ ದೇವಿಯ ದಂಪತಿಯ ಪುತ್ರರಾಗಿ ಶ್ರೀ ಪೆರಂಬದೂರಿನಲ್ಲಿ ಜನಿಸಿದರು ಶ್ರೀ ರಾಮಾನುಜರು. ಬಾಲ್ಯದಿಂದಲೂ ಈ ಮಗುವಿನ ಅಪಾರ ಭಗವದ್ಭಕ್ತಿ, ಪ್ರಖರ ತೇಜವನ್ನು ಗಮನಿಸಿದ ಹಿರಿಯರು ಶ್ರೀರಾಮನ ಅನುಜನಾದ ಲಕ್ಷ್ಮಣನೇ ಅವತರಿಸಿರುವನೆಂದು 'ರಾಮಾನುಜ' ಎಂದೇ ಅಭಿದಾನ ನೀಡಿದರು.

ಬಾಲ್ಯದಿಂದಲೂ ಮೇಲು ಕೀಳೆಂಬ ಜಾತಿಪದ್ಧತಿಯನ್ನು ಮೀರಿ, ಅಂತ್ಯಜರೆನ್ನಿಸಿದ ಪರಮ ಭಾಗವತರಾದ ಶ್ರೀ ಕಾಂಚೀ ಪೂರ್ಣರ ಶಿಷ್ಯರಾಗಿ ರಾಮಾನುಜರು ಜ್ಞಾನ ಸಂಪಾದಿಸಿದರು. ಮಹಾಮುನಿ, ವಿಶಿಷ್ಟಾದ್ವೈತ ಪ್ರತಿಪಾದಕ ಯಾಮುನಾಚಾರ್ಯರ ಕಳೇಬರದ ದರ್ಶನ ಸಂದರ್ಭವು ರಾಮಾನುಜರ ಜೀವನದಲ್ಲಿ ಒಂದು ತಿರುವು. ಯಾಮುನಾಚಾರ್ಯರು ನೆರವೇರಿಸ ಬಯಸಿದ್ದ ಮೂರು ಪ್ರತಿಜ್ಞೆಗಳನ್ನು ಲೋಕಕಲ್ಯಾಣಾರ್ಥವಾಗಿ ತಾವು ನೆರವೇರಿಸುವುದಾಗಿ ರಾಮಾನುಜರು ಪ್ರತಿಜ್ಞೆ ಮಾಡುತ್ತಾರೆ. ಅದರಂತೆ, ಆಜೀವಪರ್ಯಂತ ವಿಶಿಷ್ಟಾದ್ವೈತ ಪ್ರತಿಪಾದಕರಾಗಿ, 'ಪಂಚ ಸಂಸ್ಕಾರ'ವೆಂಬ ವೈಜ್ಞಾನಿಕ ವಿಧಿ ವಿಧಾನಗಳಿಂದ ಹಾಗೂ 'ಶ್ರೀಬಾಷ್ಯ', ರಚನೆಯಿಂದ, ಮಹರ್ಷಿ ಪರಾಶರರು ರಚಿಸಿದ 'ಶ್ರೀವಿಷ್ಣು ಪುರಾಣ'ದಲ್ಲಿ ಉಲ್ಲೇಖಿತವಾಗಿರುವ ಈಶ್ವರ, ಜೀವ ಹಾಗೂ ಜಗತ್ತುಗಳ ಸೂಕ್ಷ್ಮ ಸಂಬಂಧಗಳನ್ನು ಸರಳವಾಗಿ ಪ್ರತಿಪಾದಿಸಿ ತಾವು ಗುರುವೆಂದು ಮನಸಾ ಸ್ವೀಕರಿಸಿದ ಯಾಮುನಾಚಾರ್ಯರ ಅಂತಿಮ ಆಶಯವನ್ನು ನೆರವೇರಿಸುತ್ತಾರೆ; ಅವರ ಸ್ಥಾನವನ್ನು ಅಲಂಕರಿಸಿ ವಿಶಿಷ್ಟಾದ್ವೈತ ಪ್ರತಿಷ್ಠಾಪನಾಚಾರ್ಯರಾಗುತ್ತಾರೆ.

ತಮಿಳು ವೇದಗಳೆಂದೇ ಪ್ರಸಿದ್ಧವಾದ ನಾಲ್ಕು ಸಾವಿರ ದಿವ್ಯ ಪ್ರಬಂಧಗಳನ್ನು ರಾಮಾನುಜರು ಅಧ್ಯಯನ ಮಾಡುತ್ತಾರೆ. ಪತ್ನಿಯ ಮಾನಸಿಕತೆಗೆ ಸರಿಹೊಂದದೆ, ಯಾಮುನರಿಗೆ ನೀಡಿದ ವಚನದಂತೆ ತಮ್ಮನ್ನು ಸಮಾಜಸೇವೆಗೆ ಅರ್ಪಿಸಿಕೊಳ್ಳಲು ಶ್ರೀ ವರದರಾಜ ಸನ್ನಿಧಿಯಲ್ಲಿ ಸನ್ಯಾಸ ಸ್ವೀಕರಿಸುತ್ತಾರೆ.

ಜ್ಞಾನಿಯಾದ ಗೋಷ್ಠೀಪೂರ್ಣರಿಂದ ಪರಮರಹಸ್ಯವಾದ ಮಂತ್ರವನ್ನು ಸಂಗ್ರಹಿಸಬೇಕೆಂಬ ಸದಿಚ್ಛೆಯಿಂದ ರಾಮಾನುಜರು ಅವರನ್ನು ಸಂಪರ್ಕಿಸಲು ಯತ್ನಿಸುತ್ತಾರೆ. ಹದಿನೆಂಟು ಬಾರಿ ಯತ್ನಿಸಿದರೂ ಸಂಪರ್ಕಿಸಲು ಸಾಧ್ಯವಾಗದೆ ಕೊನೆಗೆ ಅವರಿಗೆ ಮೋಕ್ಷಪ್ರದ, ಸರ್ವದುಃಖ ನಿವಾರಕ ಮಂತ್ರದ ಉಪದೇಶವಾಗುತ್ತದೆ. ಗುರುವಿನಾಜ್ಞೆ ಮೀರಿ ತಾವು ನರಕಕ್ಕೆ ಹೋದರೂ ಸರಿ, ಇಂತಹ ಅಪೂರ್ವ ಮಂತ್ರ ಜನರಿಗೆ ಲಭಿಸಬೇಕೆಂಬ ಇಚ್ಛೆಯಿಂದ ತಿರುಕೊಟ್ಟಿಯೂರಿನ ಶ್ರೀ ಲಕ್ಷ್ಮೀನರಸಿಂಹ ದೇಗುಲದ ಗೋಪುರವನ್ನೇರಿ, ಅಲ್ಲಿ ಸೇರಿದ್ದ ಸಾವಿರಾರು ಸಮಾಜ ಬಾಂಧವರಿಗೆ ಪವಿತ್ರ ಮಂತ್ರವನ್ನು ಉಪದೇಶಿಸುತ್ತಾರೆ. ಇದಕ್ಕಾಗಿ ಗೋಷ್ಠೀಪೂರ್ಣರು ಮೊದಲು ಕೋಪಿಸಿಕೊಂಡರೂ, ನಂತರ ಇದರಿಂದ ಮಾನವ ಜನಾಂಗದ ಒಳಿತನ್ನು ಗಮನಿಸಿ ರಾಮಾನುಜರ ಶಿಷ್ಯರಾಗಲು ಇಚ್ಛಿಸುತ್ತಾರೆ.

ಆ ವೇಳೆಗೆ ತಮಿಳುನಾಡಿನಲ್ಲೆಲ್ಲಾ ಭಗವಾನ್ ಶ್ರೀ ಮನ್ನಾರಾಯಣರ ಭಕ್ತಿಪಂಥವಾದ ವಿಶಿಷ್ಟಾದ್ವೈತವು ಪ್ರಭಾವಿಯಾಗಿ ಜನಜನಿತವಾಗಿತ್ತು. ಇದನ್ನು ಸಹಿಸದ ಕೆಲ ಶೈವರು ಚೋಳ ದೇಶದ ರಾಜನಾದ ರಾಜೇಂದ್ರಚೋಳನನ್ನು ಹುರಿದುಂಬಿಸಿ, 'ವೈಷ್ಣವಧರ್ಮ ಪ್ರವರ್ತಕ ರಾಮಾನುಜರನ್ನೇ ಶೈವರಾಗಿ ಪರಿವರ್ತಿಸಿದರೆ ರಾಜ್ಯವೆಲ್ಲ ಶಿವಮಯವಾಗುವುದು' ಎಂದು ಬೋಧಿಸಿದರು. ಅದರಂತೆ, ರಾಜನು ರಾಮಾನುಜರನ್ನು ಕರೆತರಲು ಭಟರನ್ನು ಕಳುಹಿಸುತ್ತಾನೆ. ಈ ವಿಷಯ ತಿಳಿದ ಶಿಷ್ಯ ಕೂರೇಶರು ತಮ್ಮ ಶ್ವೇತ ವಸ್ತ್ರವನ್ನು ರಾಮಾನುಜರಿಗೆ ಕೊಟ್ಟು, ಅವರ ಕಾಷಾಯ ವಸ್ತ್ರವನ್ನು ತಾವು ಧರಿಸಿ ಭಟರೊಡನೆ ರಾಜಸ್ಥಾನಕ್ಕೆ ಬರುತ್ತಾರೆ. ಇವರನ್ನೇ ರಾಮಾನುಜರೆಂದು ತಿಳಿದ ರಾಜ, ಶೈವರಾಗಲು ಬಲವಂತ ಮಾಡುತ್ತಾನೆ. ಒಪ್ಪದಿದ್ದಾಗ ಅವರ ಕಣ್ಣುಗಳನ್ನು

* ಲೇಖಕರು ಯೋಗಮುದ್ರಾತಜ್ಞರು ಮತ್ತು ಗ್ರಂಥಕರ್ತರು.





ಕೀಳಿಸುತ್ತಾನೆ. ಕೂರೇಶರು ಗುರುವಿಗೆ ತಕ್ಕ ಶಿಷ್ಯರಾಗಿ ಎಲ್ಲರಿಗೂ ಒಳ್ಳೆಯದಾಗಲೆಂದೇ ಹರಸುತ್ತಾರೆ.

ರಾಜನ ಭಟರಿಂದ ತಪ್ಪಿಸಿಕೊಂಡ ರಾಮಾನುಜರು ತಮ್ಮ ಹಲವು ಆತ್ಮೀಯ ಶಿಷ್ಯರೊಂದಿಗೆ ಹೊರಡುತ್ತಾರೆ. ಕರ್ನಾಟಕದಲ್ಲಿ ಹೊಯ್ಸಳ ಸಾಮ್ರಾಜ್ಯದ ಅರಸು ವಿಠ್ಠಲದೇವ ಯಾ ಬಿಟ್ಟಿದೇವ ಜೈನಮತೀಯನಾಗಿದ್ದರೂ, ಸಕಲ ಧರ್ಮಗಳಿಗೆ ಆಶ್ರಯದಾತನಾಗಿರುವ ವಿಚಾರ ತಿಳಿದು ಕಾವೇರಿ ನದಿಗುಂಟ ಬಂದು ನೀಲಗಿರಿಯನ್ನು ಹಾದು ರಾಮಾನುಜರು ಕರ್ನಾಟಕವನ್ನು ಪ್ರವೇಶಿಸುತ್ತಾನೆ. ಶ್ರೀರಂಗನಾಥನ ಸನ್ನಿಧಿ ಶ್ರೀರಂಗಪಟ್ಟದಲ್ಲಿದ್ದು ವಿಶಿಷ್ಟಾದ್ವೈತವನ್ನು ಪ್ರಚಾರ ಮಾಡುತ್ತಾರೆ. ಅನೇಕರು ತಮಗೆ ಹೊಸದಾದ, ಸರಳವಾದ ಶ್ರೀ ವೈಷ್ಣವ ಧರ್ಮಕ್ಕೆ ಮನಸೋಲುತ್ತಾರೆ.

ರಾಜ ವಿಠ್ಠಲದೇವನು ರಾಮಾನುಜರನ್ನು ಸತ್ಕರಿಸುತ್ತಾನೆ. ರಾಮಾನುಜರು ಇಂದು ಸಾಲಿಗ್ರಾಮವೆಂದು ಕರೆಯಲ್ಪಡುವ ಗ್ರಾಮದ ಲಕ್ಷ್ಮೀನರಸಿಂಹ ದೇಗುಲದಲ್ಲಿ ತಂಗಿದ್ದರು. ಇವರ ಹೊಸ ಧರ್ಮದ ಬಗ್ಗೆ ತಿಳಿಯಲು, ವಾಗ್ವಾದ ಮಾಡಲು ಆ ಪ್ರದೇಶದ ಅನೇಕ ಜೈನ ವಿದ್ವಾಂಸರು ಬರುತ್ತಾರೆ. ಸ್ಥಾನೀಯ ಇತಿಹಾಸದಲ್ಲಿ ದಾಖಲಾಗಿರುವಂತೆ, ಆಗ ರಾಮಾನುಜರು ಪ್ರಾಕಾರದ ಎರಡು ಕಂಬಗಳಿಗೆ ತೆರೆಯೋಪಾದಿಯಲ್ಲಿ ತಮ್ಮ ಕಾಷಾಯ ವಸ್ತ್ರವನ್ನು ಕಟ್ಟುತ್ತಾರೆ., ತೆರೆಯ ಹಿಂದೆ ತಮ್ಮ ಮೂಲ ಶೇಷಾವತಾರವನ್ನು ತಾಳಿ, ಮುಂದೆ ಸೇರಿದ ನೂರಾರು ಜೈನ ವಿದ್ವಾಂಸರ ವಿದ್ವತ್ಪೂರ್ಣ, ವೈವಿಧ್ಯಮಯ ಪ್ರಶ್ನೆಗಳನ್ನು ಏಕಕಾಲದಲ್ಲಿ ಕೇಳಿ, ಎಲ್ಲರಿಗೂ ಸಮರ್ಪಕ ಉತ್ತರ ನೀಡುತ್ತಾರೆ. ಆ ಪದ್ಧತಿಯೇ ಅಷ್ಟಾವಧಾನ, ಅಂದರೆ ಎಂಟು ಮಂದಿ ಏಕಕಾಲದಲ್ಲಿ ಕೇಳುವ ಪ್ರಶ್ನೆಗಳಿಗೆ ಉತ್ತರಿಸುವುದು. ಹಾಗೂ, ಶತಾವಧಾನ ಅಂದರೆ, ನೂರಾರು ವಿದ್ವಾಂಸರು ಒಂದೇ ಬಾರಿಗೆ ಕೇಳುವ ಪ್ರಶ್ನೆಗಳೆಲ್ಲವನ್ನೂ ಮನನ ಮಾಡಿಕೊಂಡು, ಒಂದೊಂದಕ್ಕೂ ಸಮರ್ಪಕವಾಗಿ ಉತ್ತರಿಸುವ ವಿಧಾನ. ಇದು ಬಹುಶಃ ರಾಮಾನುಜರಿಂದ ಕರ್ನಾಟಕದಲ್ಲಿ ಪ್ರಚಲಿತವಾಯಿತೆಂದು ಭಾವಿಸಬಹುದಾಗಿದೆ.

ರಾಜ ಬಿಟ್ಟಿದೇವನೆಂದು ಯುದ್ಧದಲ್ಲಿ ತನ್ನದೊಂದು ಬೆರಳನ್ನು ಕಳೆದುಕೊಂಡಿದ್ದ. ಹಾಗಾಗಿ 'ಬೆರಳು ಬಿಟ್ಟ ದೇವ', 'ಬೆರಳು ಕಳೆದುಕೊಂಡ. ಊನವಾದ ದೇಹದವನೆಂದು ಜೈನ ವಿದ್ವಾಂಸ ವಲಯದಲ್ಲಿ ರಾಜನಿಗೆ ಪೂರ್ಣ ಮರ್ಯಾದೆ ಸಲ್ಲುತ್ತಿರಲಿಲ್ಲ. ಈ ಕೊರಗು ಆತನನ್ನು ಕಾಡುತ್ತಿತ್ತು. ಆದರೆ ರಾಮಾನುಜರು ವಿಶ್ವಾಸ, ಪ್ರೀತಿಯಿಂದ ರಾಜನೊಂದಿಗೆ ವ್ಯವಹರಿಸಿದರು. ಮುಖ್ಯವಾಗಿ ರಾಜನ ಮಗಳಿಗೆ ಹಿಡಿದಿದ್ದ ಪಿಶಾಚಿಯನ್ನು ತೊಲಗಿಸುತ್ತಾರೆ. ರಾಜನು ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸುತ್ತಾನೆ. ರಾಮಾನುಜರು ರಾಜನಿಗೆ 'ವಿಷ್ಣುವರ್ಧನ' ಎಂಬ ನೂತನ ನಾಮಧೇಯ ನೀಡುತ್ತಾರೆ.

ರಾಮಾನುಜರು ನಾಡಿನಲ್ಲಿ ಅನೇಕ ಕಾರ್ಯಗಳನ್ನು ಕೈಗೊಳ್ಳುತ್ತಾರೆ. ತೊಂಡನೂರಿನಲ್ಲಿ ಶಿಥಿಲವಾಗಿದ್ದ ಲಕ್ಷ್ಮೀನರಸಿಂಹ ದೇವಾಲಯವನ್ನು ಮತ್ತು ಬೇಲೂರು ಚೆನ್ನಕೇಶವ ದೇಗುಲಗಳನ್ನು ಕಲಾ ಪೂರ್ಣವಾಗುವಂತೆ ಜೀರ್ಣೋದ್ಧಾರಗೊಳಿಸಿದರು. ಯದುಗಿರಿ ಎಂಬ ಸ್ಥಳದಲ್ಲಿ ತಾನು ಇರುವುದಾಗಿ ಶ್ರೀ ಮನ್ನಾರಾಯಣನು ಹೇಳಿದಂತೆ ಆಚಾರ್ಯರಿಗೆ ಸ್ವಪ್ನವಾಗುತ್ತದೆ. ಆ ಸ್ಥಾನವನ್ನು ರಾಜನೊಂದಿಗೆ ತಲುಪುತ್ತಾರೆ. ಅಲ್ಲಿಯ ಪುಷ್ಕರಣಿಯ ಬಳಿಯ ಹುತ್ತದಲ್ಲಿ ಭಗವಂತನ ಮೂರ್ತಿ ಸಿಗುತ್ತದೆ. ಅಲ್ಲಿಯೇ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಆದರೆ ದೇಗುಲದಲ್ಲಿ ಉತ್ಸವಮೂರ್ತಿಯ ಕೊರತೆಯಿತ್ತು. ದೆಹಲಿಯ ಸುಲ್ತಾನನ ಬಳಿ ಇಲ್ಲಿಯ ಉತ್ಸವಮೂರ್ತಿ ಇರುವುದು ರಾಮಾನುಜರಿಗೆ ಸ್ಫುರಣವಾಗುತ್ತದೆ. ನೂರಾರು ಜನರೊಂದಿಗೆ ತೆರಳಿ, ಸುಲ್ತಾನನ ಮಗಳು ಬೀಬಿ ಲಾಚಿಮರ್ ಬಳಿ ಇದ್ದ ಸುಂದರ ವಿಗ್ರಹವನ್ನು ಸಂಗ್ರಹಿಸಿ ಯದುಗಿರಿಗೆ, ಮೇಲುಕೋಟೆಗೆ ತಂದು ಪ್ರತಿಷ್ಠಾಪಿಸುತ್ತಾರೆ. 'ರಾಮಪ್ರಿಯ' ಎಂಬ ಈ ವಿಗ್ರಹವನ್ನು ಅತ್ಯಂತ ಪ್ರೀತಿಸುತ್ತಿದ್ದ ಬೀಬಿ ಲಾಚಿಮರ್, ಮೂರ್ತಿಯನ್ನು ಅಗಲಿರಲಾರದೆ ಮೇಲುಕೋಟೆಯನ್ನು ಹುಡುಕೊಂಡು ಬಂದು, ತನ್ನ ಅಂತ್ಯದವರೆಗೆ ಮೂರ್ತಿಯನ್ನು ಅರ್ಚಿಸುತ್ತಾಳೆ. ಮಹಮ್ಮದೀಯಳಾದರೂ ಆಕೆಯ ಅನನ್ಯ ಭಕ್ತಿ ಶ್ರದ್ಧೆಯನ್ನು ಗಮನಿಸಿದ ರಾಮಾನುಜರು ಭಗವಂತನ ಸಮೀಪದಲ್ಲೇ ಆಕೆಯ ವಿಗ್ರಹವನ್ನೂ ಸ್ಥಾಪಿಸಿ, 'ಬೀಬಿ ನಾಚ್ಚಿಯಾರ್' ಅಂದರೆ ದೇವನ ಪತ್ನಿ ಎಂದೇ ಪುರಸ್ಕರಿಸಿದರು.

ರಾಮಾನುಜರು ಮೇಲುಕೋಟೆಯನ್ನು ತಿರುನಾರಾಯಣಪುರ ಎಂದು ಹೆಸರಿಸಿದರು. ತಮಗೆ ಬೆಂಬಲವಾಗಿ ನಿಂತ ಎಲ್ಲ ಅಂತ್ಯಜರನ್ನು ಪುರಸ್ಕರಿಸಿ, 'ತಿರುಕುಲತ್ತಾರ್' ಎಂದೇ ಸಂಬೋಧಿಸಿ, ಉತ್ಸವ ಕಾಲದ ಮೂರು ದಿನ ದೇವಾಲಯ ಪ್ರವೇಶ, ಅರ್ಚನಾದಿಗಳಿಗೆ ವ್ಯವಸ್ಥೆ ಮಾಡಿದರು. ಹನ್ನೆರಡು ವರ್ಷಗಳ ಕಾಲ ಚೆಲುವನಾರಾಯಣನ ಸನ್ನಿಧಿಯಲ್ಲಿದ್ದ ರಾಮಾನುಜರು, ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಐದು ಸರ್ವಾಂಗಸುಂದರ ದೇಗುಲಗಳನ್ನು ಸ್ಥಾಪಿಸಿದರು. ಅವೆಂದರೆ ತೊಂಡನೂರಿನ ನಂಬಿನಾರಾಯಣ, ಗದಗದ ವೀರನಾರಾಯಣ, ಬೇಲೂರಿನ ಚೆನ್ನಿಗನಾರಾಯಣ, ಗುಂಡ್ಲುಪೇಟೆಯ ವಿಜಯನಾರಾಯಣ ಮತ್ತು ತಲಕಾಡಿನ ಕೀರ್ತಿ ನಾರಾಯಣ. ಇವು ಪಂಚನಾರಾಯಣ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

*(ಕೃಪೆ : ಬೋಧಿವೃಕ್ಷ)*

# ಸಂವಿಧಾನ ಶಿಲ್ಪಿ ಡಾ॥ ಬಿ.ಆರ್. ಅಂಬೇಡ್ಕರ್

- ಶ್ರೀಮತಿ ಮಮತಾ ರವಿಕುಮಾರ್ *

**ಸ್ವಾ**ತಂತ್ರ್ಯ ಭಾರತದ ಸಂವಿಧಾನ ಶಿಲ್ಪಿ, ಆಧುನಿಕ ಮನು, ಸಮಾನತೆಯ ಹರಿಕಾರ, ದಲಿತರ ಆಶಾಜ್ಯೋತಿ, ಸಮಾನತೆಗಾಗಿ, ಮಾನವೀಯತೆಯ ಮೌಲ್ಯಗಳಿಗಾಗಿ ಅಹರ್ನಿಶಿ ದುಡಿದ ಪುರುಷಸಿಂಹ, ಭಾರತಾಂಬೆಯ ಹೆಮ್ಮೆಯ ವರಪುತ್ರ ಮಹಾನ್ ಸಮಾಜ ಸುಧಾರಕ ಡಾ॥ ಬಿ.ಆರ್. ಅಂಬೇಡ್ಕರ್.

ಬಿ.ಆರ್. ಅಂಬೇಡ್ಕರ್ ೧೮೯೧ರ ಏಪ್ರಿಲ್ ೧೪ರಂದು ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯಲ್ಲಿನ ಅಂಬುವಾಡಿ ಗ್ರಾಮದಲ್ಲಿ ಜನಿಸಿದರು. ತಂದೆ ರಾವ್‌ಸಕ್ ಪಾಲ್, ತಾಯಿ, ಭೀಮಬಾಯಿ.

ಅಂಬವಾಡೇಕರ್ ಕುಟುಂಬ ಜಾತಿ, ಮತ, ಭೇದಗಳಲ್ಲಿ ನಂಬಿಕೆಯಿಲ್ಲದ ಕಬೀರ್‌ದಾಸ ಭಕ್ತಿಪಂಥಕ್ಕೆ ಸೇರಿತ್ತು. ಮನೆಯಲ್ಲಿ ಸುಸಂಸ್ಕೃತ ವಾತಾವರಣವಿತ್ತು. ಜೀವನ ಮೌಲ್ಯಗಳನ್ನು ಮೈಗೂಡಿಸಿಕೊಳ್ಳಲು ಉತ್ತಮ ಪರಿಸರವಿತ್ತು.

ಇನ್ನು ಕುಟುಂಬದ ಹೊರಗಿನ ಸಮಾಜಕ್ಕೆ ಸಂಬಂಧಿಸಿದಂತೆ ೧೯೪೭ರ ಹಿಂದಿನ ಹರಿಜನರ ಬಾಳು ನಿಜಕ್ಕೂ ಶೋಚನೀಯ. ಅಂದಿನ ದಿನಗಳಲಿ ಕೆಲವು ಕಡೆ ಅಸ್ಪೃಶ್ಯ ಜಾತಿಯ ಯಾವ ವ್ಯಕ್ತಿಯೂ ಮೇಲ್ಜಾತಿಯವರು ವಾಸಿಸುತ್ತಿದ್ದ ಬೀದಿಗಳಲ್ಲಿ ಹಗಲಿನ ಬೆಳಿಗ್ಗೆ ೯ಗಂಟೆಯೊಳಗೆ ಮತ್ತು ಮಧ್ಯಾಹ್ನ ೩ರ ನಂತರ ತಿರುಗಾಡುವಂತಿರಲಿಲ್ಲ. ಏಕೆಂದರೆ ಆ ಸಮಯದಲ್ಲಿ ವ್ಯಕ್ತಿಯ ನೆರಳು ಉದ್ದವಾಗಿದ್ದು ಮೇಲ್ಜಾತಿಯವರ ಮೇಲೆ ಬಿದ್ದು ಮೈಲಿಗೆಯಾಗಬಹುದಾದ ಸಂಭವವಿತ್ತು! ನಿರ್ದಿಷ್ಟ ಅವಧಿಯಲ್ಲಿ ತಿರುಗಾಡಬಹುದಾಗಿದ್ದರೂ ಆ ಬೀದಿಯ ರಸ್ತೆಯ ಮೇಲೆ ಉಗುಳುವ ಸ್ವಾತಂತ್ರ್ಯ ವಿರಲಿಲ್ಲ. ಒಂದು ವೇಳೆ ಕೆಮ್ಮು ಮೊದಲಾದ ಕಾರಣಗಳಿಂದ ತೊಂಟೆ ಬಂದು ಉಗುಳುವಂತಾದರೆ ದನಗಳಿಗೆ ಶಿಕ್ಷೆ ನೀಡುವ ಹಾಗೆ ಇವರ ಕುತ್ತಿಗೆಗೆ ಒಂದು ಚಿಪ್ಪು ಅಥವಾ ಕುಡಿಕೆ ಕಟ್ಟಿಕೊಂಡು ಅದರಲ್ಲಿ ಉಗುಳಿಕೊಂಡು ಸಾಗ ಬೇಕಿತ್ತು! ಇಂತಹ ಅನೇಕ ಕಹಿ ಘಟನೆಗಳು ನಡೆಯುತ್ತಿದ್ದವು. ಒಮ್ಮೆ ತನ್ನ ಅಣ್ಣನೊಡನೆ ತಂದೆಯವರನ್ನು ನೋಡಲು ಹೋಗುವಾಗ, ಒಂದು ಗಾಡಿಯನ್ನು ಬಾಡಿಗೆಗೆ ಹಿಡಿದು ಪ್ರಯಾಣಿಸುತ್ತಿದ್ದಾಗ ಇವರ ಮಾತುಗಳನ್ನು ಆಲಿಸಿದ ಗಾಡಿಯ ಚಾಲಕ ಇವರನ್ನು ಅಸ್ಪೃಶ್ಯರು ಎಂದು ತಿಳಿದು ತಕ್ಷಣವೇ ಗಾಡಿ ನಿಲ್ಲಿಸಿ, ಮೂಕಿಯನ್ನು ಎತ್ತಿ ಅನಾಮತ್ ಗೊಬ್ಬರ ಸುರಿಯುವಂತೆ ಸುರಿದು ಅವಾಚ್ಯ ಶಬ್ದಗಳಿಂದ ಬೈಯಲು ಆರಂಭಿಸಿದ. ಆ ಹುಡುಗರು ರಪ್ ಎಂದು ಬಿದ್ದು ಹಿಂದೆ ಮುಂದೆ ನೋಡದೆ ಓಡಬೇಕಾಯಿತು.

ಅಂಬವಾಡೇಕರ್ ಬುದ್ಧಿವಂತ, ಛಲಗಾರ, ನಿರ್ಭೀತ, ಆತ ಆರಂಭದಿಂದಲೂ ಒಬ್ಬ ಅತ್ಯಂತ ಪ್ರತಿಭಾನ್ವಿತ ವಿದ್ಯಾರ್ಥಿ. ತಂದೆ ನಿವೃತ್ತರಾಗಿದ್ದು ಆದಾಯ ಕಡಿಮೆಯಿತ್ತು. ಮುಂಬಯಿಯ ಒಂದು ಚಿಕ್ಕ ಕೊಠಡಿಯಲ್ಲಿ ತಂದೆ ಮಗನ ವಾಸ. ಒಬ್ಬ ಮಲಗುವಷ್ಟು ಮಾತ್ರ ಜಾಗವಿದ್ದ ಆ ಕೊಠಡಿಯಲ್ಲಿ ೨ ಗಂಟೆ ರಾತ್ರಿಯವರೆಗೂ ಮಗ ನಿದ್ರೆ ಮಾಡಿ ನಂತರ ಎದ್ದು ಓದಲು ತೊಡಗುವುದು. ತಂದೆ ಆ ಜಾಗದಲ್ಲಿ ನಿದ್ದೆ ಮಾಡುವುದು.

ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಅಂಬೇಡ್ಕರ್ ಎಂಬ ಒಬ್ಬ ಉಪಾಧ್ಯಾಯರು ಅಂಬ ವಾಡೇಕರ್‌ಗೆ ತುಂಬಾ ಪ್ರಿಯವಾಗಿದ್ದರು. ಅವನ ಬುದ್ಧಿಶಕ್ತಿ ಆತನ ಬಗ್ಗೆ ತಮಗಿದ್ದ ಪ್ರೀತಿ, ಅಭಿಮಾನಿಗಳಿಂದ ಅವನ ಹೆಸರನ್ನು ಅಂಬೇಡ್ಕರ್ ಆಗಿ ಪರಿವರ್ತಿಸಿದರು. ಅಂದಿನಿಂದ ಆತ ಅಂಬೇಡ್ಕರ್ ಆದ.

ಅಂಬೇಡ್ಕರ್ ಎಸ್.ಎಸ್.ಎಲ್.ಸಿ. ಯನ್ನು ಮುಂಬಯಿಯಲ್ಲಿ ಮುಗಿಸಿದರು. ೧೨ ವರ್ಷ ವಯಸ್ಸಾಗಿ ದ್ದಾಗ ಅವರಿಗೆ ಬಾಲ್ಯ ವಿವಾಹ ಸಂಪ್ರದಾಯದಂತೆ ರಮಾಬಾಯಿ ಎಂಬುವರೊಡನೆ ವಿವಾಹವಾಯಿತು.

ನಂತರ ಬಿ.ಎ. ಯಲ್ಲಿ ಉತ್ತೀರ್ಣರಾದರು. ಬರೋಡಾ ಮಹಾರಾಜರ ಬಳಿ ಕೆಲಸಕ್ಕೆ ಸೇರಿದರು. ಅವರ ಪ್ರತಿಭೆಯನ್ನು ಗುರುತಿಸದ ರಾಜ ಅವರನ್ನು ಅಮೆರಿಕಾಕ್ಕೆ, ನಂತರ ಇಂಗ್ಲೆಂಡಿಗೆ ಉನ್ನತ ವ್ಯಾಸಂಗಕ್ಕಾಗಿ ಕಳುಹಿಸಿದರು. ಅಲ್ಲಿ ಅವರು ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ ವಿಷಯಗಳನ್ನು ಆಳವಾಗಿ ಅಭ್ಯಸಿಸಿ ಎಂ.ಎಸ್. ಪದವಿ,

* ೩ನೇ ಅಡ್ಡರಸ್ತೆ, ೯ನೇ ಮುಖ್ಯರಸ್ತೆ, ಎಸ್.ಐ.ಟಿ. ಬಡಾವಣೆ, ತುಮಕೂರು.





ಆನಂತರ ಡಾಕ್ಟರೇಟ್ ಪದವಿ ಪಡೆದರು. ಅವರು ವ್ಯಾಸಂಗ ಮಾಡುವಾಗ ಯಾವುದೇ ಮೀಸಲಾತಿಯ ಸೌಲಭ್ಯ ಪಡೆದುಕೊಳ್ಳದೆ ಕೇವಲ ಅರ್ಹತೆಯ ಆಧಾರದ ಮೇಲೆ ಶೈಕ್ಷಣಿಕ ಉನ್ನತಿ ಸಾಧಿಸಿದರು.

ಭಾರತಕ್ಕೆ ಮರಳಿದ ಮೇಲೆ 'ಮೂಕನಾಯಕ' ಎಂಬ ಪತ್ರಿಕೆಯನ್ನು ಆರಂಭಿಸಿ ಇಲ್ಲಿನ ಹರಿಜನರ ತೀವ್ರತರವಾಗಿ ವರ್ಣಿಸಿ ಬರೆಯಲಾರಂಭಿಸಿದರು. ಅವರು 'ಬಹಿಷ್ಕೃತ ಭಾರತ' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು. ಹೋದ ಕಡೆ ಹರಿಜನರ ಕೇರಿಗಳಲ್ಲಿ ತಂಗುತ್ತಿದ್ದರು.

ಭಾರತದ ಸಮಸ್ಯೆಗಳನ್ನು ಚರ್ಚಿಸುವುದಕ್ಕಾಗಿ ಬ್ರಿಟಿಷ್ ಸರ್ಕಾರ ಭಾರತದ ಹಲವಾರು ನಾಯಕರುಗಳನ್ನು ಸಭೆಗೆ ಕರೆಯಿತು. ಗಾಂಧೀಜಿ ಭಾಗವಹಿಸಿದ ದುಂಡುಮೇಜಿನ ಪರಿಷತ್ತಿನಲ್ಲಿ ಅಂಬೇಡ್ಕರ್‌ರವರು ಭಾಗವಹಿಸಿದ್ದರು. ಹಿಂದೂಗಳಲ್ಲಿ ಆಗಬೇಕಾದ ಸುಧಾರಣೆಗಳನ್ನು ಭಾರತೀಯರ ವಾಸ್ತವಿಕ ಪರಿಸ್ಥಿತಿಯನ್ನು ನೊಂದ ಮನಸ್ಸಿ ನಿಂದ ತೀಕ್ಷ್ಣಮತಿಯಿಂದ ನಿವೇದಿಸಿಕೊಂಡರು.

ನಮ್ಮ ಭಾರತಕ್ಕೆ ೧೯೪೭ರಲ್ಲಿ ಸ್ವಾತಂತ್ರ್ಯ ಬಂತು. ನಮಗೆ ಪ್ರಜಾಪ್ರಭುತ್ವವಿರಬೇಕು. ಸಂವಿಧಾನ ಬೇಕು. ರಾಜ್ಯಾಂಗ ರಚನಾ ಸಮಿತಿಯನ್ನು ರಚಿಸಬೇಕು. ನಮ್ಮ ರಾಷ್ಟ್ರಕ್ಕೆ ಸಂವಿಧಾನವನ್ನು ರಚಿಸಲು ಸಮರ್ಥರಾರು? ಯಾರನ್ನಾದರೂ ಅಮೆರಿಕಾ ಇಲ್ಲವೇ ಇಂಗ್ಲೆಂಡಿನಿಂದ ಕರೆಸುವುದೇ ಮುಂತಾದ ಸಲಹೆಗಳು ಬಂದವು. ಆದರೆ ಅಂಬೇಡ್ಕರ್‌ರವರ ಪ್ರತಿಭೆಯ ಪರಿಚಯವಿದ್ದ ಕೆಲವು ಪ್ರಮುಖರು ಸಂವಿಧಾನವನ್ನು ರೂಪಿಸಲು ಅವರ ಹೆಸರನ್ನು ಸೂಚಿಸಿದರು. ಅಂಬೇಡ್ಕರ್ ಮತ್ತು ಸಹ ಸದಸ್ಯರು ಸಾಕಷ್ಟು ಸಮರ್ಪಕವಾದ ಸಂವಿಧಾನದ ಕರಡನ್ನು ೧೯೪೯ರ ನವೆಂಬರ್ ನಲ್ಲಿ ನೀಡಿದರು.

ನೆಹರೂ ಪ್ರಧಾನಿಯಾದರು. ಅಂಬೇಡ್ಕರ್‌ರವರನ್ನು ಕಾನೂನು ಮಂತ್ರಿಯನ್ನಾಗಿ ನೇಮಿಸಿಕೊಂಡರು. ೧೯೫೦ರಲ್ಲಿ ಸಿಂಹಳದಲ್ಲಿ ನಡೆದ ಬುದ್ಧ ಸಮ್ಮೇಳನಕ್ಕೆ ಹೋಗಿ ಬಂದರು. ಆಗ ಅವರು ಬೌದ್ಧ ಮತಕ್ಕೆ ಸೇರಲು ಮನಸ್ಸು ಮಾಡಿದರು. ಏಕೆಂದರೆ ಅವರೇ ಹೇಳುವಂತೆ 'ನನಗೆ ಕ್ರೈಸ್ತ ಇಲ್ಲವೇ ಇಸ್ಲಾಂ ಧರ್ಮಕ್ಕೆ ಸೇರಲು ಇಚ್ಛೆಯಿಲ್ಲ, ಕಾರಣ ಆ ಧರ್ಮಗಳಿಗೆ ಹೋದರೆ ನಾನೂ ಹಿಂದೂ ಸಂಸ್ಕೃತಿಯಿಂದ ವಂಚಿತನಾಗುತ್ತೇನೆ. ಆದ್ದರಿಂದ ಹಿಂದೂ ಸಂಸ್ಕೃತಿ ಹಾಗೂ ಪರಿಪೂರ್ಣ ಸಮಾನತೆಯುಳ್ಳ ಬೌದ್ಧ ಮತವನ್ನು ಸ್ವೀಕರಿಸುತ್ತೇನೆ. ೧೯೫೬ರ ಅಕ್ಟೋಬರ್ ೧೪ರಂದು ನಾಗಪುರದಲ್ಲಿ ನಡೆದ ಬೃಹತ್ ಸಮಾರಂಭ ದಲ್ಲಿ ತಮ್ಮ ೨ನೇ ಪತ್ನಿ ಡಾ॥ ಶಾರದ ಕಬೀರ್ ಅವರೊಂದಿಗೆ ಬೌದ್ಧ ಮತಕ್ಕೆ ಸೇರಿದರು. ನಂತರ ಕೆಲವೇ ದಿನಗಳಲ್ಲಿ ಅಂದರೆ ೧೯೫೬ನೇ ಡಿಸೆಂಬರ್ ೬ರಂದು ಅಂಬೇಡ್ಕರ್ ದೈವಾಧೀನರಾದರು.

ಅಂಬೇಡ್ಕರ್ ಅವರು ಉತ್ತಮ ಸಾಹಿತ್ಯ ರಚನೆಕಾರರು ಆಗಿದ್ದರು. 'ಪಾಕಿಸ್ತಾನವನ್ನು ಕುರಿತ ಚಿಂತನೆ', 'ಅಸ್ಪೃಶ್ಯರು ಯಾರು?', 'ಬುದ್ಧ ಮತ್ತು ಅವನ ತತ್ತ್ವಗಳು', 'ಭಾರತದಲ್ಲಿ ಕ್ರಾಂತಿ ಮತ್ತು ಪ್ರತಿಕ್ರಾಂತಿ', 'ಹಿಂದೂ ಮಠದ ಉಗಮ' ಇವೇ ಮೊದಲಾದವು ಅವರ ಉತ್ತಮ ಕೃತಿಗಳಾಗಿವೆ.

ಇಡೀ ರಾಷ್ಟ್ರಕ್ಕೆ ತಮ್ಮ ವಿಶಿಷ್ಟ ಕಾಣಿಕೆಯಾಗಿ ಸಂವಿಧಾನವನ್ನು ನೀಡಿರುವ ಆ ಸಂವಿಧಾನದಲ್ಲಿ ಭಾರತದ ಎಲ್ಲ ವರ್ಗದ ಜನರ ಪ್ರಗತಿಗೆ, ಅಸ್ಪೃಶ್ಯರ ಸರ್ವತೋಮುಖ ಅಭಿವೃದ್ಧಿಗೆ ರಾಜಕೀಯ, ಆರ್ಥಿಕ, ಶೈಕ್ಷಣಿಕ ಮೊದಲಾದ ವಿವಿಧ ಕ್ಷೇತ್ರಗಳಲ್ಲಿನ ಬದುಕಿಗೆ ಉತ್ತಮ ರೀತಿಯ ಅವಕಾಶ ಹಾಗೂ ವ್ಯವಸ್ಥೆಗಳನ್ನು ಕಲ್ಪಿಸಿರುವರು.

ಕೇಂದ್ರದಲ್ಲಿ ಬಲಿಷ್ಠ, ಸ್ಥಿರ ಹಾಗೂ ಸಂಘಟಿತ ಸರಕಾರವಿರಬೇಕು ಎಂಬುದು ಅವರ ಇಚ್ಛೆಯಾಗಿತ್ತು. ಅವರು ಏಕರೂಪದ ನ್ಯಾಯಾಂಗ ವ್ಯವಸ್ಥೆ ಹಾಗೂ ಏಕ ರೂಪದ ನಾಗರಿಕ ಸಂಹಿತೆ ಭಾರತದ ಸಮಗ್ರತೆಗೆ ಅತ್ಯವಶ್ಯಕ ಎಂದು ದೃಢವಾಗಿ ನಂಬಿದ್ದರು. ಪ್ರಾಥಮಿಕ ಹಂತದವರೆಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡಬೇಕು. ಕೇಂದ್ರ ಮತ್ತು ರಾಜ್ಯಮಟ್ಟದಲ್ಲಿ ದೇಶದ ಎಲ್ಲಾ ಕಛೇರಿಗಳಲ್ಲಿ ಒಂದು ರಾಷ್ಟ್ರೀಯ ಭಾಷೆಯನ್ನು ಬಳಸಬೇಕು ಎಂದು ಪ್ರತಿಪಾದಿಸಿದ್ದರು.

ಮೀಸಲಾತಿಯ ಬಗ್ಗೆ ಕಾಳಜಿವುಳ್ಳವರಾಗಿದ್ದರೂ ಅದು ಶಾಶ್ವತವಾಗಿರಬೇಕು ಎಂಬುದು ಅವರ ಅಭಿಪ್ರಾಯವಾಗಿರಲಿಲ್ಲ. ಅಲ್ಪಸಂಖ್ಯಾತರ ಹಕ್ಕುಗಳು, ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟುಗಳಿಗೆ ಮೀಸಲಾತಿ ಇತ್ಯಾದಿ ಸೌಲಭ್ಯಗಳು ತಾತ್ಕಾಲಿಕವೆಂದು ಅವರು ದೃಢವಾಗಿ ನಂಬಿದ್ದರು. ಎಲ್ಲರೂ ರಾಷ್ಟ್ರೀಯ ಪ್ರವಾಹದಲ್ಲಿ ತಮ್ಮ ವೈಶಿಷ್ಟ್ಯವನ್ನು ಬದಿಗೊತ್ತಿ ಒಂದಾಗಬೇಕು ಎಂದು ಬಯಸಿದ್ದರು.

'ಭಾರತರತ್ನ' ಅಂಬೇಡ್ಕರ್‌ರವರಂತಹ ಮಹಾ ಪುರುಷರು ಎಂದೆಂದಿಗೂ ಅಜರಾಮರರು. ಅವರ ಸಿದ್ಧಾಂತಗಳನ್ನು ಅನುಷ್ಠಾನಗೊಳಿಸುವ ಹಾಗೂ ಆದರ್ಶಗಳನ್ನು ಪಾಲಿಸುವ ಕೆಲಸ ವ್ಯಾಪಕವಾಗಿ ಆಗಬೇಕಾಗಿದೆ.

# ಅನುಭಾವಿ ಅಕ್ಕ

– ಯು.ಎನ್. ಸಂಗನಾಳಮಠ *

*'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ,*
*ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,*
*ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ,*
*ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಮದೇವಾ*
*ಮಹಾದೇವಿಯಕ್ಕನ ಒಂದು ವಚನ ನಿರ್ವಚನ'*

ಎಂದು ಚೆನ್ನಬಸವಣ್ಣನವರು ಕೊಂಡಾಡಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಹಲವು ವಚನ ಕಾರರು ಕನ್ನಡ ನುಡಿಯನ್ನು ಬೆಳಗಿಸಿದರು. ಜ್ಞಾನದ ಖಣಿಯಾಗಿ ಅಲ್ಲಮಪ್ರಭು, ಭಕ್ತಿಭಂಡಾರಿ ಬಸವಣ್ಣನವರು ಕರ್ಮ ಯೋಗಿ ಸಿದ್ಧರಾಮ, ವೈರಾಗ್ಯನಿಧಿ ಅಕ್ಕಮಹಾದೇವಿ ಹೀಗೆ ಹಲವಾರು ಶರಣರ ವಚನಗಳು ಸದಾ ಹಸಿರಾಗಿರುತ್ತವೆ.

ಅಕ್ಕ ಕನ್ನಡ ಸಾಂಸ್ಕೃತಿಕ ಚರಿತ್ರೆ ಕಂಡ ಮೊದಲ ದಾರ್ಶನಿಕಳು. ಸಾಹಿತ್ಯ ಚರಿತ್ರೆ ಕಂಡ ಮೊದಲ ಕವಯಿತ್ರಿ, ಆಧ್ಯಾತ್ಮಲೋಕದ ಅನುಭಾವಿನಿ. ಸಂಸಾರದಿಂದ ವಿರಾಗಿನಿ. ಬಾಲ್ಯದಿಂದಲೇ ಅಕ್ಕ ಕನಸುಗಾರ್ತಿ. ಆ ಕನಸು ನಲ್ಲನಿಗೆ ಸಂಬಂಧಿಸಿದ್ದರೂ ಲೌಕಿಕವಲ್ಲ ಅನುಭಾವಿಕ. ಅವಳ ಅನ್ವೇಷಣೆಯೇ ಅನುಭಾವಿಕವಾದದ್ದು. ಅನುಭವದ ಜಗತ್ತಿನಿಂದ ಆಧ್ಯಾತ್ಮಿಕ ಜಗತ್ತಿನ ಅನುಭಾವಕ್ಕೆ ಸಾಗಿದವಳು ಅಕ್ಕಮಹಾದೇವಿ. ಬಾಲ್ಯದಿಂದಲೇ ತನಗರಿವು ಇಲ್ಲದಂತೆ ಪರಶಿವನೇ ತನ್ನ ಪತಿ, ತಾನು ಅವನ ಸತಿ, ಎಂಬ ಅಚಲ ಭಾವನೆ ಹೊಂದಿದ್ದಳು. ಬಸವಣ್ಣನವರ ಕ್ರಾಂತಿಯುತ ಆಧ್ಯಾತ್ಮ ವಿಚಾರಗಳಿಗೆ ಪ್ರಭಾವಿತಳಾದವಳು. ಉಡುತಡಿಯ ಮಠದಲ್ಲಿಯ ಅನುಭಾವ ಗೋಷ್ಠಿ ಚಿಂತನೆ ಕಾರ್ಯ ಕ್ರಮಗಳಲ್ಲಿ ಭಾಗವಹಿಸುತ್ತಿದ್ದಳು. ಭವ ಬಂಧನವ ದಾಟಿ ಪರಮಸುಖ ಕಂಡುಕೊಳ್ಳುವ ಮಾರ್ಗದತ್ತ ಅವಳ ಮನಸ್ಸು ಸದಾ ತುಡಿಯುತ್ತಿತ್ತು.

ಒಂದು ಸಲ ಅವಳ ಗೆಳತಿಯರೆಲ್ಲ ಸೇರಿ ಮದುವೆ ಯಾಗುವ ಭಾಗ್ಯಶಾಲಿ ಯಾರು ಎಂದು ಛೇಡಿಸಿದಾಗ, ಮಹಾದೇವಿ ತನ್ನ ಭಾವನೆಯನ್ನು,

*ಗಿರಿಯಲ್ಲದೆ ಹುಲು ಮೊರಡಿಯಲ್ಲಾಡುವುದೇ ನವಿಲು!*
*ಕೊಳನಲ್ಲದೆ ಕಿರುವಳ್ಳಕೆಳಸುವುದೇ ಹಂಸೆ !*
*ಮಾಮರ ತಳಿರಿಲ್ಲದೆ ಸ್ವರಗೈಯುವುದೇ ಕೋಗಿಲೆ!*
*ಪರಿಮಳವಿಲ್ಲದ ಪುಷ್ಪಕೆಳಸುವುದೇ ಭ್ರಮರ*
*ಎನ್ನದೇವ ಚೆನ್ನಮಲ್ಲಿಕಾರ್ಜುನನಲ್ಲದೇ*
*ಅನ್ಯಕ್ಕೆಳಸುವುದೇ ಎನ್ನಮನ! ಕೇಳಿರೇ ಕೆಳದಿಯರಿರಾ'*

ಕೌಶಿಕ ಮಹಾರಾಜ ತಾನು ಮದುವೆಯಾಗುತ್ತೇನೆಂಬ ವಿಚಾರವನ್ನು ಮುಂದಿಟ್ಟಾಗ–

*'ಎಮ್ಮಿಗೊಂದು ಚಿಂತೆ, ಸಮಗಾರಗೊಂದು ಚಿಂತೆ*
*ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ*
*ನನಗೆ ನನ್ನ ಚಿಂತೆ, ತನಗೆ ಕಾಮದ ಚಿಂತೆ*
*ಒಲ್ಲೆ ಹೋಗು ಸೆರಗು ಬಿಡು ಮರುಳೆ*
*ಎನಗೆ ಚೆನ್ನಮಲ್ಲಿಕಾರ್ಜುನದೇವರು*
*ಒಲಿವರೋ ಒಲಿಯರೋ ಎಂಬ ಚಿಂತೆ'*

ಎಂದಳು. ರಾಜನ ಕಟ್ಟುಪಾಡಿಗೆ ಬಿದ್ದು, ಅವನಿಗೇ ಕೆಲವು ನಿಯಮಗಳನ್ನು ವಿಧಿಸಿ, ಅವುಗಳಂತೆ ನಡೆಯುವೆನೆಂದು ವಚನಬದ್ಧಳಾಗಿ ಮದುವೆ ಆದರೂ, ಲಿಂಗ–ಜಂಗಮ ಆರಾಧನೆ ಸಮಯ ದಲ್ಲಿ ಕೌಶಿಕನಿಂದ ಅಡ್ಡಿ ಬಂದಾಗ, ಮಹಾದೇವಿಯ ದೇಹದ ಆಸೆಯನ್ನು ಬಯಸಿದಾಗ–

*'ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ*
*ಎಲುವಿನ ತಡಿಕೆ, ಕೀವಿನ ಹಡಿಕೆ*
*ಸುಡಲೀ ದೇಹವ ಒಡಲು ವಿಡಿದು ಕೆಡದಿರು*
*ಚೆನ್ನಮಲ್ಲಿಕಾರ್ಜುನನರಿ ಮರುಳೇ'*

ಎಂದಳು. ಅಲ್ಲದೇ ನಿನ್ನ ಕಲಿತನವನ್ನು ನಿನ್ನ ಇಂದ್ರಿಯ ಗಳನ್ನು ಗೆಲ್ಲುವುದರ ಮೂಲಕ ತೋರಿಸು ಎಂದು ಅರಮನೆಯ ಸೆರೆಯಿಂದ ಮುಕ್ತಳಾಗಿ ಕಲ್ಯಾಣದತ್ತ ಪ್ರಯಾಣ ಿಸಿದಳು. ಆಕೆಯ ಉದಾತ್ತ ಗುರಿ ಚೆನ್ನಮಲ್ಲಿಕಾರ್ಜುನನನ್ನು ತನ್ನ ಪತಿಯಾಗಿ ಪಡೆಯುವುದರ ಬಗ್ಗೆ, ನಿಶ್ಚಿತ ನಿಲುವಿನಿಂದ ಅವಳನ್ನು ವಿಮುಕ್ತವಾಗಿಸಲು ಸಾಧ್ಯ? ಅವಳ ವೀರ ನುಡಿಗಳು–

*'ನಾಳೆ ಬರುವುದು ನಮಗಿಂದೇ ಬರಲಿ*
*ಇಂದು ಬರುವುದು ನಮಗೀಗಲೇ ಬರಲಿ*
*ಆಗೀಗ ಎನ್ನದಿರೋ ಚೆನ್ನಮಲ್ಲಿಕಾರ್ಜುನ'*

ಅಕ್ಕ ತನ್ನ ಅನುಭಾವಿ ನಲ್ಲನನ್ನು (ಚೆನ್ನಮಲ್ಲಿಕಾರ್ಜುನ) ಪ್ರಕೃತಿಯ ಚೇತನಾ ಚೇತನಗಳಲ್ಲಿ ಅರಸುತ್ತಾಳೆ. ಅರಸುತ್ತ ಹಂಬಲಿಸುತ್ತ ಪ್ರಾಣಿಪಕ್ಷಿಗಳ ಸಂಕುಲವನ್ನು ಪ್ರಶ್ನಿಸುತ್ತಾಳೆ.

*'ಚಿಲಿಮಿಲಿ ಎಂದು ಓದುವ ಗಿಳಿಗಳಿರಾ.....*
*ಸರವೆತ್ತಿ ಹಾಡುತ ಕೋಗಿಲೆಗಳಿರಾ*
*ಎರಗಿ ಬಂದಾಡುವ ದುಂಬಿಗಳಿರಾ*
*ಕೊಳನ ತಡಿಯಾಡುವ ಹಂಸಗಳಿರಾ*
*ಗಿರಿಗಹ್ವರದೊಳಾಡುವ ನವಿಲುಗಳಿರಾ*
*ನೀವು ಕಾಣಿರೆ, ನೀವು ಕಾಣಿರೆ*
*ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ'*

* 'ಜ್ಯೋತಿರ್ಲಿಂಗ', ಶಿವಮೊಗ್ಗ ರಸ್ತೆ, ೧ನೇ ಒಳತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ.





ಹಾಗೆ

*'ಅಳಿ ಸಂಕುಲವೆ, ಮಾಮರವೆ, ಬೆಳದಿಂಗಳೆ, ಕೋಗಿಲೆಯೆ*
*ನಿಮ್ಮನೆಲ್ಲರನೂ ಒಂದ ಬೇಡುವೆನು*
*ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡಡೆ ಕರೆದು ತೋರಿರೆ'*

ಅಕ್ಕ ತನ್ನ ಸುಂದರ ಚೆಲುವನಿಗಾಗಿ ಹಂಬಲಿಸಿದ್ದು ಕನಸಿನ ಸಹಜತೆ ಆಗಿದೆ.

*'ಅಕ್ಕ ಕೇಳ, ನಾನೊಂದು ಕನಸ ಕಂಡೆ*
*ಅಕ್ಕಿ ಅಡಕೆ ಓಲೆ ತೆಂಗಿನಕಾಯಿ ಕಂಡೆ*
*ಚಿಕ್ಕ ಚಿಕ್ಕ ಜಡೆಗಳ ಸುಲ್ಲಿಗೊರವನು*
*ಭಿಕ್ಷಕೆ ಮನೆಗೆ ಬಂದುದ ಕಂಡೆನವ್ವ*
*ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು*
*ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು'*

ತನ್ನ ಆಧ್ಯಾತ್ಮಿಕ ಪತಿ ದೊರೆಯದಿದ್ದಾಗ

*'ಹಿಂಡನಗಲಿ ಹಿಡಿವಡೆದ ಕುಂಜರ*
*ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ*
*ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ*
*ನಿಮ್ಮವರ ನೆನೆವೆನಯ್ಯ*
*ಕಂದಾ, ನೀನಿತ್ತಬಾರೆಂದು ಕರೆದು ನಿಮ್ಮಂದವ ತೋರಯ್ಯಾ'*

ಎಲ್ಲಿಯೂ ಕಾಣದಾದಾಗ ಹತಾಶಳಾಗದಿರುವುದು ಅವಳ ಅಚಲತೆಗೆ ಸಾಕ್ಷಿಯಾಗಿದೆ

*'ಕಟ್ಟಿಲ್ಲದೆ ಬೇಗೆಯಲ್ಲಿ ಬೆಂದೆನವ್ವಾ*
*ಏರಿಲ್ಲದ ಗಾಯದಲ್ಲಿ ನೊಂದೆನವ್ವಾ*
*ಸುಖವಿಲ್ಲದ ಧಾವತಿಗೊಂಡೆನವ್ವಾ*
*ಚೆನ್ನಮಲ್ಲಿಕಾರ್ಜುನ ದೇವಂಗೊಲಿದು*
*ಬಾರದ ಭವಂಗಳಲ್ಲಿ ಬಂದೆನವ್ವಾ'*

ಹೀಗೆ ಅಕ್ಕ ಉಡುತಡಿಯಿಂದ ತಮ್ಮ ಪಯಣ ಆರಂಭಿಸಿ, ಪಯಣದ ಉದ್ದಕ್ಕೂ ಅನೇಕ ಪ್ರಸಂಗಗಳನ್ನು ಎದುರಿಸಿ ಹಲವಾರು ವಚನಗಳನ್ನು ಕಟ್ಟಿ ಹಾಡುತ್ತ ಹಿಂದೊಮ್ಮೆ ಕಂಡ ಕನಸಿನ ಕಲ್ಯಾಣವನ್ನು ನನಸಾಗಿ ನೋಡುತ್ತಾಳೆ.

*'ಕಲ್ಯಾಣವೆಂಬುದಿನ್ನಾರಿಗೂ ಹೋಗಬಾರದು*
*ಅಸಾಧ್ಯವಯ್ಯ! ಒಳಗು ತಿಳಿದು ಚೆನ್ನಮಲ್ಲಿಕಾರ್ಜುನಂಗೊಲಿದು*
*ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು*
*ನಮೋ ನಮೋ ಎನುತಿರ್ದೆನು'*

ಭಕ್ತಿ ಜ್ಞಾನ ವೈರಾಗ್ಯದ ಮೂರ್ತಿಯಾಗಿದ್ದ ಅಕ್ಕ ಕಲ್ಯಾಣದ ಅನುಭವ ಮಂಟಪದ ಹೊರಬಾಗಿಲಲ್ಲಿ ನಿಂತಾಗ ಒಂದು ಪರೀಕ್ಷೆಗೆ ಒಳಪಡುತ್ತಾರೆ. (ಈಗಾಗಲೇ ಕೌಶಿಕನ ಕಾಮುಕ ಕಣ್ಣಿಗೆ, ಪಯಣದಲ್ಲಿ ಅನೇಕ ಕಾಮುಕರ ಕಣ್ಣಿಗೆ ಬಿದ್ದು ಪರೀಕ್ಷೆಗೆ ಒಳಗಾಗಿ ಗೆದ್ದು ಬಂದಿದ್ದಳು).

ಅಕ್ಕನಿಗೆ ಮೊದಲು ಕಣ್ಣಿಗೆ ಬಿದ್ದವರು ಕಿನ್ನರಿ ಬ್ರಹ್ಮಯ್ಯ ಅಕ್ಕನನ್ನು ಕಂಡು ಲಿಂಗಾನುಭವ ಸಂಪನ್ನೆ ಯಾದರೆ ಶರಣೆನ್ನುವೆ. ದೇಹ ಲಜ್ಜಾಭಿಮಾನವಿದ್ದಡೆ ಸ್ತ್ರೀಯಾಗಿ ಕೈ ಹಿಡಿಯುವೆ ಎಂದು ಮನದಲ್ಲಿ ಭಾವಿಸಿ–

*'ಕಾಯದಲ್ಲಿ ಕಳವಳವಿರಲು, ಪ್ರಾಣದಲಿ ಮಾಯೆಯಿರಲು*
*ಎತರ ಗಮನ ಇದೇತರ ನಿರ್ವಾಣ! ಮಹಾಲಿಂಗ ತ್ರಿಪುರಾಂತಕ*
*ನಿನ್ನ ಸಂಸಾರಿ ಎಂಬನಲ್ಲದೆ ಸಜ್ಜನೆ ಎಂದು ಕೈವಿಡಿವನಲ್ಲ'*

ಎನ್ನಲಾಗಿ ಮತ್ತು ಮುಂದುವರಿದು

*'ನಿನ್ನ ಲಾವಣ್ಣ ರಸವ ಕಂಡು ಮನಹಾರೈಸಿತ್ತೆನಗೆ*
*ನಿನ್ನ ಪ್ರೌಢಿಯಿಂದ ಕೂಡಿಹೆನೆಂಬುದು ಭಾವದಲ್ಲಿ ಉಚ್ಚ ಬರಿಯ*
*ಹೆಂಗೂಸಾಗಿ ತೋರಿತ್ತೆನಗೆ...... ನಿನ್ನ ಸಮಸುಖ ಕೂಟದೊಳಿದ್ದು*
*ಶಿವಭಾವ ಭಕ್ತಿಯಿಂ ಗೆಲುವೆನು ಬಾರೌ ಹೆಣ್ಣೆ ಎಂದು ಕೈವಿಡಿದೆನು'*

ಎನ್ನಲಾಗಿ ತಕ್ಷಣ ಅಕ್ಕನ ನುಡಿ ಸಿಡಿಲೆರಗಿದಂತೆ ಬಂದಿತು–

*'ನೋಡುವ ಕಂಗಳಿಗೆ ರೂಪಿಂಬಾಗಿರಲು ನೀವು ಮನ*
*ನಾಚದೆ ಬಂದಿರಣ್ಣ! ನಾರಿಯೆಂಬ ರೂಪಿಂಗೆ ನೀವು*
*ಒಲಿದು ಬಂದಿರಣ್ಣ! ಮೂತ್ರವು ಒಂದು ಒಸರುವ ನಾಳ*
*ಬಿಂದು ಎಂದು ಕಂಗಾಣದೆ ಮುಂದುಗೆಟ್ಟು*
*ಬಂದಿರಣ್ಣ! ಬುದ್ಧಿ ಗೇಡಿತನದಿಂದ ಪರಮಾರ್ಥದ*
*ಸುಖವ ಹೋಗಲಾಡಿಕೊಂಡು ಇದಾವ ಕಾರಣ*
*ವೆಂದರಿಯದೆ ನೀವು ನರಕ ಹೇತುವಂದರಿದು ಮನ*
*ಹೇಸದೆ ಬಂದಿರಣ್ಣ! ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿದ*
*ಪುರುಷರೆನಗೆ ಸಹೋದರರು ಛೀ! ಹೋಗಾ ಮರುಳೆ'*

ಎಂದು ಹೇಳಿದಾಗ, ಬ್ರಹ್ಮಯ್ಯ ಅದನ್ನು ಅರ್ಥೈಸಿಕೊಳ್ಳ ಲಾಗದೇ ಅವಳನ್ನು ಹಿಡಿಯಲು ಹೋದಾಗ ಅಕ್ಕ 'ನೀನಿಂತು ಮುಂದುಗೆಡುವರೆ ನನ್ನ ತನುವನೊಪ್ಪಿಸುವೆ ನಿನ್ನ ಮನಕ್ಕೆ ಬಂದಂತೆ ಮಾಡು' ಎಂದಾಗ ಬ್ರಹ್ಮಯ್ಯ ಅಕ್ಕನ ದೇಹ ಮುಟ್ಟಿದಾಗ, ಅಕ್ಕನ ಶರೀರದಲ್ಲಿ ಶಿವ ಸೌಂದರ್ಯ ನೋಡಿ ಬೆರಗಾಗಿ, ವಿದ್ಯುತ್ ಸಂಚಾರ ವಾದಂತಾಗಿ, ಅವನ ಪಾಲಿಗೆ ಪರುಷದ ಸೋಂಕಾಗಿ, ಮರ್ತ್ಯವನ್ನು ಅಮರ್ತ್ಯಕ್ಕೆ ಒಯ್ಯುವ ಸೋಂಕಾಗುತ್ತದೆ. ಕಾಯಕ್ಕೆ ಅಂಟಿದ ಕತ್ತಲೆ ಮನಕ್ಕೆ ಅಂಟಿದ ಮಾಯೆ, ಏಕಕಾಲದಲ್ಲಿ ಹೊಡೆದೋಡಿಸುವ ಜ್ಯೋತಿ ಆಗುತ್ತಾಳೆ.

ಆಗ 'ನಿಲವನರಿಯದೆ ಅಳುಪಿ ಕೆಟ್ಟೆನು', 'ವಿಷಯಂಗಳು ವಿಷಮವಾದುದಲ್ಲಾ ಎನ್ನ ವ್ಯಸನಂಗಳು ಹಗೆ ಯಾದವಲ್ಲಾ, ಎನ್ನ ಮುಳಿಸೆ ಬರಸಿಡಿಲಾಯಿತಲ್ಲಾ' ಎಂದು ವ್ಯಥೆ ಪಟ್ಟು 'ವಿಷವೆಂಬ ಅಗ್ನಿಗೆ ತನುವೆ ಮಿಥ್ಯವಾಯಿತು' ಎಂದು ಪಶ್ಚಾತ್ತಾಪ ಹೊಂದಲು ಅಕ್ಕ– 'ನಿನ್ನನೇ ಸಂವರಿಸಿ ಕೈದುವ ಕೊಳ್ಳಿರಣ್ಣಾ ಚೆನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣಾ' ಎಂದಳು. ಬ್ರಹ್ಮಯ್ಯ ಶರಣಾರ್ಥಿ ಎಂದು ತೊಡಕ ನೀವು ಬಿಡಿಸಿದರಾಗಿ ನಿಮ್ಮ ದಯದಿಂದ ನಾನು 'ಹುಲಿನೆಕ್ಕಿ' ಬದುಕಿದೆನು ಎಂದನು. ದೀರ್ಘದಂಡ ಪ್ರಣಾಮ ಸಲ್ಲಿಸಿದನು. ಇಲ್ಲಿ ಹುಲಿನೆಕ್ಕಿ ಪದ ಪ್ರಯೋಗವಿದೆ. ಹುಲಿ ಎಂದರೆ ಕಾಮ, ಇದು ಆವರಿಸಿದರೆ ಮನುಷ್ಯ ನಾಶವಾದಂತೆ ಅಂದರೆ ಇಲ್ಲಿ ಕಾಮವನ್ನು ಗೆದ್ದೆನು ಎಂಬ ಭಾವ ಇದೆ. ಇದು ಕಲ್ಯಾಣ ಪ್ರವೇಶಿಸುವಾಗ ಆದ ಪರೀಕ್ಷೆ ಯಾದರೆ ಅನುಭವ ಮಂಟಪದಲ್ಲಿ ಮತ್ತೊಂದು ಪರೀಕ್ಷೆ ಬಸವಾದಿ ಶರಣರನ್ನು ಕಂಡು–

*'ಅಯ್ಯ ನಿಮ್ಮ ಸಜ್ಜನ ಶರಣರ ಸಜ್ಜನೆ ಸದ್ಭಾವದ್ಭಾವಕಂಡೆ*
*ನಾಗಿ ಎನ್ನಕಂಗಳ ಪಟಲ ಹರಿಯಿತ್ತಿಂದು*
*ಅಯ್ಯ ನಿಮ್ಮ ಸಜ್ಜನ ಸದ್ಭಾವರ ಶ್ರೀಚರಣಕ್ಕೆರಗಿದೆನಾಗಿ*
*ಎನ್ನ ಹಣೆಯ ಲಿಖಿತ ತೊಡೆಯಿತ್ತು'*

ಎಂದು ಹೇಳಲಾಗಿ ಬಸವಣ್ಣನವರು ಪ್ರಭುದೇವರಿಗೆ ಅಕ್ಕನನ್ನು ತೋರಿಸಿ,

*'ಕಾಯದ ಲಜ್ಜೆಯ ಕಲ್ಪಿತವ ಕಳೆದು*
*ಜೀವದ ಲಜ್ಜೆಯ ಮೋಹವನಳಿದು*
*ಕೂಡಲಸಂಗಮದೇವಯ್ಯ*

ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವ ನೋಡಾ ಪ್ರಭುವೇ' ಎಂದಾಗ ಅಲ್ಲಮಪ್ರಭುಗಳು

*'ಉದಮದದ ಯೌವನಸೊಳಕೊಂಡ ಸತಿ ನೀನು ಇತ್ತಲೇಕೆ*
*ಬಂದೆಯವ್ವ ಸತಿ ಎಂದರೆ ಮುನಿವರು ನಮ್ಮ ಶರಣರು*
*ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು*
*ಅಲ್ಲದೊಡೆ ತೊಲಗು ತಾಯೆ, ನಮ್ಮ ಗುಹೇಶ್ವರನ*
*ಶರಣರಲ್ಲಿ ಸಂಗ ಸುಖ ಸನ್ನಿಹಿತ ಬಯಸುವರೆ, ನಿನ್ನ*
*ಪತಿ ಯಾರೆಂದು ಹೇಳು ಎಲೆಯವ್ವ' ಎನ್ನಲಾಗಿ*
*'ಚೆನ್ನಮಲ್ಲಿಕಾರ್ಜುನ ಗಂಡನೆಗೇ ಮಿಕ್ಕಿನ ಲೋಕದ ಗಂಡರೆನಗೆ*
*ಸಂಬಂಧವಿಲ್ಲವಯ್ಯಾ'*

ಎನ್ನುವಳು. ಪುನಃ ಅಲ್ಲಮರು–

*'ತನು ಸೀರೆಯನುಳಿದು ನಿರ್ವಾಣದಲ್ಲಿ ಮನದ ಭ್ರಾಂತು*
*ನಿಶ್ಚಯವಾಗದು, ಕೇಶವೆಂಬ ಸೀರೆ ಅಂಗಕ್ಕೆ ಮರೆ*
*ಯಾಯಿತ್ತು. ಅಪಮಾನವೆಂತು ಹರಿಯಿತ್ತು ಅದು*
*ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ'*

ಎಂದು ಕೇಳಿದಾಗ ಅಕ್ಕ ಒಂದರ ಹಂಗು ಬಿಟ್ಟು ಇನ್ನೊಂದರ ಹಂಗು ಹಿಡಿದಿರುವುದು ನನಗಾಗಿ ಅಲ್ಲ ಇದು ಜನರ ಹಂಗಿಗಾಗಿ

*'ಫಲ ಒಳಗೆ ಪಕ್ವವಾಗಿಯಲ್ಲದೆ*
*ಹೊರಗಣ ಸಿಪ್ಪೆ ಒಪ್ಪಗೆಡದು*
*ಕಾಮನ ಮುದ್ರೆಯ ನಿಮಗೆ ನೋವಾದೀತೆಂದು*
*ಆ ಭಾವದಿಂದ ಮುಚ್ಚಿದೆ ಇದಕ್ಕೆ ನೋವೇಕೆ*
*ಕಾಡದಿರಣ್ಣಾ ಚೆನ್ನಮಲ್ಲಿಕಾರ್ಜುನ ದೇವನ ಒಳಗಾದವಳ'*

ಎಂಬ ದಿಟ್ಟತನದ ವೈರಾಗ್ಯ ಪ್ರಕಟವಾಯಿತು. ಅರಿಷಡ್ವರ್ಗಗಳನ್ನು ಹೇಗೆ ದಾಟಿದ್ದೇನೆಂಬುದನ್ನು –

*'ಕಾಮದಿಂದ ಖಂಡ, ಕ್ರೋಧದಿಂದ ಅಸ್ಥಿ*
*ಲೋಭದಿಂದ ಸಕಲ ವಿಷಯಂಗಳು*
*ಮೋಹದಿಂದ ನೋಡಿದೆನೆಂಬುದೆಲ್ಲವು*
*ಕಾಮನ ಬಲೆಯೊಳಗು ಕಾಮನ ಗದ್ದ*
*ಕಾವಾವುದು ಹೇಳಾ ಗುಹೇಶ್ವರ ಲಿಂಗಕ್ಕೆ'*

ಎಂದು ಕೇಳಿದಾಗ, ಕಾಮನನ್ನು ಗೆಲ್ಲುವುದಕ್ಕೆ ಆ ಕಾಮ ನನ್ನ ಮನದಲ್ಲಿ ಹುಟ್ಟೇ ಇಲ್ಲ ಎಂದು

*'ಅಂಗದ ಭಂಗವ ಲಿಂಗಸುಖದಿಂದ ಗೆಲಿದೆ*
*ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ*
*ಜೀವದ ಭಂಗವ ಶಿವಾನುಭವದಿಂದ ಗೆಲಿದೆ*
*ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ*
*ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ*
*ಕಾಮನ, ಸುಟ್ಟುರುಹಿದ ಭಸ್ಮವ ನೋಡಯ್ಯಾ?*
*ಚೆನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗು ಉಹಿದರೆ,*
*ಮನಸಿಜನ ತಲೆಯ ಬರಹವ ತೊಡೆದೆನು'*

ಎಂಬ ಶಿವತತ್ವವನ್ನು ಹೊರಹೊಮ್ಮಿಸಿದ್ದಾಳೆ.

ಈ ಮಾತು ಕೇಳಿ ಪ್ರಭುದೇವರ ಮನಸ್ಸು ಪ್ರಫುಲ್ಲಿತವಾಯಿತು. ಅಕ್ಕ ಈ ಪರೀಕ್ಷೆಯಲ್ಲಿ ಗೆದ್ದು ಸ್ವಲ್ಪ ಕಾಲ ಅಲ್ಲಿ ಇದ್ದು, ಪ್ರಭುವಿನ ಮಾರ್ಗದರ್ಶನದಂತೆ ಕದಳಿ ಯತ್ತ ಸಂಪೂರ್ಣ ಆಧ್ಯಾತ್ಮ ಸಾಧನೆಗೆ ಹೊರಟಳು.

ಶ್ರೀ ಶೈಲದ ಕದಳಿವನ ಪ್ರವೇಶಿಸಲು

*'ಸತಿ–ಪತಿ ಭಾವದಲ್ಲಿ ಬೆರೆತಾಗ*
*ತನ ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ*
*ಮನ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ*
*ಅರಿವು ನಿಮ್ಮಲ್ಲಿ ಸ್ಥಯವಾದ ಬಳಿಕ ನಾನಾರನರಿವೆ*
*ಚೆನ್ನಮಲ್ಲಿಕಾರ್ಜುನಾ ನಿಮ್ಮಲ್ಲಿ ನೀವಾಗಿ ನಿಮ್ಮಿಂದ*
*ನಿಮ್ಮ ಮರೆದೆನಯ್ಯಾ'*

ಎಂದು ಆಧ್ಯಾತ್ಮದ ಪರಮಾವಧಿಯ ಪರಮಾನಂದದ ಅಲೆಗಳ ಮೇಲೆ ತೇಲುತ್ತಿರುವಾಗ

*ಅಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ ನಿಸ್ಸಂಗವೆನ್ನೆ*
*ಆಯಿತೆನ್ನೆ ಆಗದೆನ್ನೆ ನೀನೆನ್ನೆ ನಾನೆನ್ನೆ ಚೆನ್ನಮಲ್ಲಿಕಾರ್ಜುನ*
*ಲಿಂಗದಲ್ಲಿ ಘನೈಕ್ಯವಾದ ಬಳಿಕ ಮತ್ತೇನೂ ಎನಸೊಲ್ಲದೆ ಇದ್ದೆನು'*

ಕೊನೆಗೆ ಕದಳಿಯ ವನ ಪ್ರವೇಶಿಸಿ ಅಲ್ಲಿಗೆ ಬಂದ ಸನ್ಯಾಸಿ ಕೌಶಿಕನನ್ನು ಭೇಟಿ ಮಾಡಿ ಅಂತರಂಗದ ಕದಳಿಯನ್ನು ಪ್ರವೇಶಿಸಿದಳು.

ಅಂತರಂಗದ ಕದಳಿ ವಿರಲು ಈಡಾಪಿಂಗಳ ಸುಷುಮ್ನ ನಾಡಿಗಳು ಸೇರುವ ಭ್ರೂಮಧ್ಯವೇ ತ್ರಿಕೂಟ. ಮಹಾದೇವಿ ವೈರಾಗ್ಯದ ಸೋಪಾನದಿಂದ ತ್ರಿಕೂಟ ಮಾರ್ಗದಿಂದ ಐಕ್ಯದ ತುದಿಯನ್ನು ಮುಟ್ಟಲು ಸಾಧನೆ ಮಾಡಿ ಸಾಧಿಸಿದಳು.

*ತನುವಿನೊಳಗಿದ್ದು ತನುವ ಗೆದ್ದಳು*
*ಮನದೊಳಗಿದ್ದು ಮನವ ಗೆದ್ದಳು*
*ವಿಷಯದೊಳಗಿದ್ದು ವಿಷಯಂಗಳ ಗೆದ್ದಳು*
*ಅಂಗಸಂಗವ ತೊರೆದು ಭವವ ಗೆದ್ದಳು*
*ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ*
*ಬಗಿದು ಹೊಕ್ಕು ನಿಜಪದವನೈದಿದ*
*ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು'*

ಎಂಬ ಹೃದಯ ತುಂಬಿದ ಚೆನ್ನಬಸವಣ್ಣ ನವರ ಮಾತು ಎಷ್ಟು ಅರ್ಥಪೂರ್ಣ!





# ಸಮರ್ಪಣಾ ಭಾವ

– ಪ. ರಾಮಕೃಷ್ಣ ಶಾಸ್ತ್ರಿ *

**ದಾ**ನ–ಧರ್ಮ ಎಂಬ ಎರಡು ಪದಗಳು ನಮ್ಮ ಸನಾತನ ಸಂಸ್ಕೃತಿಯ ಜತೆಗೆ ನಾವು ಬೆಳೆಸಿಕೊಂಡು ಬಂದ ಅವಳಿ ಮೌಲ್ಯಗಳು. ಶರಣು ಎಂದು ಬಂದ ಪಾರಿವಾಳದ ಜೀವವುಳಿಸಲು ಅದನ್ನು ಬೆನ್ನಟ್ಟಿ ಬಂದಿರುವ ಗಿಡುಗನಿಗೆ ಪಾರಿವಾಳದ ತೂಕದಷ್ಟೇ ಮಾಂಸವನ್ನು ತೊಡೆ ಯಿಂದ ಕತ್ತರಿಸಿ ಕೊಟ್ಟ ರಾಜಾ ಶಿಬಿಯ ಹೆಸರನ್ನು ಇಂದಿಗೂ ಸ್ಮರಿಸುತ್ತೇವೆ. ದೊರೆಯ ಧರ್ಮ ಪ್ರವೃತ್ತಿಯ ಪರೀಕ್ಷೆಗೆ ಅಗ್ನಿಯು ಪಾರಿವಾಳದ ಹಾಗೆ, ಇಂದ್ರನು ಗಿಡುಗನ ಹಾಗೆ ವೇಷ ಧರಿಸಿ ಬಂದಿರುವುದು ಆನಂತರ ತಿಳಿಯುತ್ತದೆ.

ಮಹಾಭಾರತದಲ್ಲಿ ಯುಧಿಷ್ಠಿರನು ರಾಜಸೂಯಾ ಯಾಗವನ್ನು ಮಾಡಿ ದಾನಧರ್ಮಗಳನ್ನು ನೆರವೇರಿಸಿದ ಬಳಿಕ ಇಷ್ಟು ದೊಡ್ಡ ಯಾಗ ತನ್ನಂತೆ ಇನ್ನಾರೂ ಮಾಡಿಸಿರಲಿಕ್ಕಿಲ್ಲ ಎಂದು ಮನಸ್ಸಿನಲ್ಲೇ ಹೆಮ್ಮೆಪಡುತ್ತಾನೆ. ಆ ವೇಳೆಗೆ ಆತ ಅನ್ನದಾನ ಮಾಡಿದ ಜಾಗದಲ್ಲಿ ಒಂದು ಮುಂಗಸಿ ಬಂದು ಹೊರಳಾಡುತ್ತದೆ. ಅದರ ಅರ್ಧ ಮೈ ಬಂಗಾರದ್ದಾಗಿದೆ. ತನ್ನ ಇಡೀ ಮೈ ಬಂಗಾರವಾಗಬೇಕೆಂಬ ಆಶೆಯಿಂದ ಎಲ್ಲಿ ಅನ್ನದಾನ ನಡೆದರೂ ಹೀಗೆ ಹೋಗಿ ಹೊರಳಾಡುತ್ತಿದ್ದೇನೆ, ಆದರೆ ಅರ್ಧ ಮೈ ಬಂಗಾರವಾಗಲು ಕಾರಣವಾದಂತಹ ಅಸೀಮ ದಾನವನ್ನು ಇನ್ನೆಲ್ಲೂ ಕಾಣಲಿಲ್ಲ ಎನ್ನುತ್ತದೆ.

ಮುಂಗಸಿಯ ಮೈಯ ಅರ್ಧ ಭಾಗ ಬಂಗಾರವಾಗಲು ಕಾರಣವಾದದ್ದು ಒಂದು ಬಡ ಕುಟುಂಬದ ದಾನ. ಅನೇಕ ದಿನಗಳಿಂದ ಇಡೀ ಕುಟುಂಬಕ್ಕೆ ಆಹಾರ ಸಿಗದೆ ಉಪವಾಸ ವಿದ್ದರು. ಕಡೆಗೆ ಎಲ್ಲಿಂದಲೋ ಒಂದು ಹಿಡಿ ಜವೆಗೋಧಿ ತಂದು ಒಟ್ಟು ಮಾಡಿ ಒಂದು ರೊಟ್ಟಿ ತಯಾರಿಸಿದರು. ಮನೆಯ ನಾಲ್ಕು ಮಂದಿ ನಾಲ್ಕು ಭಾಗ ಮಾಡಿ ತಿನ್ನಲು ಕುಳಿತುಕೊಳ್ಳುವಾಗ ಧರ್ಮದೇವತೆ ಹಸಿವಿನಿಂದ ಒದ್ದಾಡುವ ವ್ಯಕ್ತಿಯ ರೂಪ ತಳೆದು ಅಂಗಳಕ್ಕೆ ಬಂದ. ಮನೆಯ ಯಜಮಾನ ಅವನ ಪಾಲಿನ ರೊಟ್ಟಿಯನ್ನು ಸಂತೋಷದಿಂದ ಅವನಿಗೆ ನೀಡಿದ. ಅದನ್ನು ತಿಂದರೂ ಅವನಿಗೆ ಸಾಕಾಗಲಿಲ್ಲ. ಉಳಿದವರು ಒಬ್ಬೊಬ್ಬರಾಗಿ ತಮ್ಮ ಸರ್ವಸ್ವವಾಗಿದ್ದ ರೊಟ್ಟಿಯನ್ನು ಸಮರ್ಪಿಸಿದರು. ತಿಂದು ಸಂತೃಪ್ತ ನಾದ ಧರ್ಮದೇವತೆ ಅವರಿಗೆ ನಿಜರೂಪದಲ್ಲಿ ಕಾಣಿಸಿ ಅನುಗ್ರಹಿಸಿದ. ಈ ಮನಃಪೂರ್ವಕ ದಾನದ ನೆಲದಲ್ಲಿ ಹೊರಳಾಡಿ ಮುಂಗಸಿಯ ದೇಹದ ಭಾಗ ಬಂಗಾರವಾಗಿ ಶೋಭಿಸಿತು.

ಸಮರ್ಪಣಾಭಾವದಿಂದ ಮಾಡುವ ದಾನ ಅದು ಅತ್ಯಂತ ಅರ್ಹತೆ ಉಳ್ಳವರಿಗೆ ಸಂದಾಯವಾಗಬೇಕು. ಹೀಗಾದಾಗ ಮಾಡಿದ ದಾನಕ್ಕೆ ಸಾರ್ಥಕ್ಯಭಾವ ಬರುತ್ತದೆ. ಎಷ್ಟೋ ಸಂದರ್ಭಗಳಲ್ಲಿ ದಾನಿಯು ಅಮೃತಶಿಲೆಯಲ್ಲಿ ತನ್ನ ಹೆಸರು ಬರೆದಿಡಲು ಒಪ್ಪಿದವರಿಗೆ ಮಾತ್ರ ದಾನ ನೀಡಲು ಮುಂದಾಗುತ್ತಿರುವ ಇಂದಿನ ವ್ಯಾಪಾರಿ ಮನೋ ಭಾವನೆಯ ದಾನವೂ ಕಾಡುತ್ತದೆ. ಹಣವನ್ನು ಕಟ್ಟಿಡುವ ಬದಲು ದಾನಧರ್ಮಗಳಿಗೆ ಬಳಸಬೇಕೆಂದು ದಾಸರು ಒತ್ತಾಯ ಮಾಡುತ್ತಾರೆ. 'ಮಂಚ ಬಾರದು, ಮಡದಿ ಬಾರಳು, ಕಂಚು ಕನ್ನಡಿ ಬಾರದು, ಸಂಚಿತಾರ್ಥದ ದ್ರವ್ಯ ಬಾರದು, ಮುಂಚೆ ಮಾಡಿರೂ ಧರ್ಮವ ಅರ್ಥವ್ಯಾಧಿಗೆ ಪುತ್ರರ್ಯಾರಿಗೆ ಇಷ್ಟ ಮಿತ್ರರು ಯಾರಿಗೆ? ಕರ್ತೃ ಯಮನವರೊಯ್ಯುತಿರು ವಾಗ ಅರ್ಥ, ಪುತ್ರರು ಬರುವರೆ?' ಎಂದು ಪ್ರಶ್ನಿಸುತ್ತಾರೆ.

ಆದರೆ ಮನಃಪೂರ್ವಕವಾಗಿ ತನ್ನ ಗಳಿಕೆಯಲ್ಲಿ ಒಂದಂಶ ವನ್ನಾದರೂ ಲಾಭ ಮಾಡಬೇಕೆಂಬ ಮನೋವೃತ್ತಿ ಇಂದಿನ ದಿನಗಳಲ್ಲಿ ಲುಪ್ತವಾದಂತೆ ಕಾಣಿಸುತ್ತದೆ. 'ಉಣ್ಣಲಿಲ್ಲ ಉಡಲೇ ಇಲ್ಲ, ಬಣ್ಣವನಂತೂ ಬಳೀಲಿಲ್ಲ, ಸಣ್ಣನೆ ಹೆಂಡತಿ ಬಳಿಯ ಲಿದ್ದರು ಕಣ್ಣನೆತ್ತಿ ನೋಡಲೇ ಇಲ್ಲ. ಅಣ್ಣ ನಾಳೆಗಿರಲೆಂದು ಹುದುಗಿಸಿಟ್ಟೆ, ಕನ್ನ ಕೊರೆದು ಕಳ್ಳನು ಹೊತ್ತೊಯ್ದನಲ್ಲೊ' ಎಂಬ ಅನುಭಾವಿಗಳ ಮಾತು ನೆನಪಾಗುತ್ತದೆ. ಬಂಗಾರದ ಬಟ್ಟಲಿನಲ್ಲಿ ಉಣ್ಣುವವನಿಗೆ ರುಚಿಗಳಲ್ಲಿ ಶ್ರೇಷ್ಠವಾದ ಸಿಹಿಯನ್ನು ಮುಟ್ಟಿ ನೋಡಲೂ ಸಾಧ್ಯವಾಗುವುದಿಲ್ಲ. ಊಟಕ್ಕೆ ರುಚಿ ನೀಡುವ ಉಪ್ಪು ತಿನ್ನುವಂತಿಲ್ಲ. ರೇಷ್ಮೆ ಬಟ್ಟೆ ಧರಿಸಿದರೆ ಅಲರ್ಜಿಯಾಗುತ್ತದೆ. ದೇಹದೊಳಗೆ ಪರಮಾತ್ಮನು ಜೀವಸ್ವರೂಪಿಯಾಗಿ ನೆಲೆಸಿ ದೇಹದ ಮೂಲಕ ಸುಖ–ದುಃಖಗಳನ್ನು ಅನುಭವಿಸುವಾಗ ಅವನಿಗೆ ಕೇವಲ ಕಹಿಯ

* ಅಂಚೆ ತೆಂಕಕಾರಂದೂರು, ಬೆಳ್ತಂಗಡಿ ತಾಲ್ಲೂಕು, ದ.ಕ. ಜಿಲ್ಲೆ–೫೭೪ ೨೧೭.

ಅನುಭವವೇ ಆಗುತ್ತದೆ. ಆದರೂ ಹಣದ ಮೇಲಿನ ವ್ಯಾಮೋಹ ಹೋಗಲೊಲ್ಲದು. ವ್ಯಾಮೋಹದಿಂದ ಸಂಗ್ರಹಿಸಿಡುವ ಧನರಾಶಿಯನ್ನು ಸಮರ್ಪಣಾಭಾವದಿಂದ ಸಮಾಜಕ್ಕೆ ಅರ್ಪಿಸುವ ಮನೋಭಾವ ಅಗತ್ಯವಿದೆ.

ಇದರಿಂದ ಅದೆಷ್ಟೋ ಬಡ ಕುಟುಂಬಗಳಿಗೆ ಉಚಿತವಾಗಿ ವಿದ್ಯೆ-ಆಹಾರ ನೀಡಿ, ಬದುಕಿಗೊಂದು ಉದ್ಯೋಗ ಕಲ್ಪಿಸುವ ವಿದ್ಯಾಸಂಸ್ಥೆ ಉಗಮವಾಗಬಹುದು. ಬಡವರ ಸಂಸಾರದ ಆಧಾರಸ್ತಂಭಕ್ಕೆ ಅರ್ಬುದ, ಹೃದ್ರೋಗ, ಮೂತ್ರಪಿಂಡದ ವ್ಯಾಧಿ ಬಂದರೆ ಚಿಕಿತ್ಸೆಗಾಗಿ ಸೆರಗೊಡ್ಡಿ ಹಣ ಸಂಗ್ರಹಿಸುವ ಹೊತ್ತಿಗೆ ಪ್ರಾಣ ಹೇಗಾಗಿರುತ್ತದೆ. ಮಗಳಿಗೆ ಮದುವೆ ಮಾಡಿ ಕನ್ಯಾಸೆರೆ ಕಳಚಲು ಹಣವೇ ಅಡ್ಡಿಯಾದ ಸಂಸಾರಗಳಿವೆ. ಇರಲು ಮರದ ನೆರಳೇ ಮನೆಯಾದವರಿದ್ದಾರೆ. ಸ್ವಂತ ಉದ್ಯೋಗಕ್ಕೆ ಹಂಬಲಿಸುವ ಯುವ ಮನಸ್ಸುಗಳಿವೆ. ಇವರನ್ನೆಲ್ಲ ಹುಡುಕಿ ಒಬ್ಬರ ಬದುಕಿಗಾದರೂ ತಂಪನ್ನು ಮಾಡಲು ಬಳಕೆ ಮಾಡದ ಸಂಪತ್ತನ್ನು ವಿನಿಯೋಗಿಸುವ ಧರ್ಮಶೀಲ ಮನಸ್ಸು ಇಂದು ಅಗತ್ಯವಾಗಿದೆ.

ಆಧುನಿಕ ಯುಗದಲ್ಲಿ ಡಂಭಾಚಾರ ಬದುಕಿಗೆ ಅನಿವಾರ್ಯ ಎಂಬ ಮನೋವೃತ್ತಿ ಇದೆ. ಹತ್ತಾರು ಬಗೆಯ ವ್ಯಂಜನಗಳಿಂದ ಕೂಡಿದ ಊಟ. ಅದರಲ್ಲಿ ಅರ್ಧ ಹೊಟ್ಟೆಗೆ, ಇನ್ನುಳಿದದ್ದು ತಿಪ್ಪೆಗೆ. ಪ್ರತಿಯೊಬ್ಬರದೂ ಖುಷಿ ಸದೃಶ ಬದುಕಾಗಬೇಕು. ಆರೋಗ್ಯಯುತವಾಗಿ ಬದುಕಲು ಎಷ್ಟು ಪ್ರಮಾಣದ ಆಹಾರ ಬೇಕೋ ಅಷ್ಟನ್ನೇ ಸ್ವೀಕರಿಸುವ ಮನಃಸ್ಥಿತಿ ನಿರ್ಮಾಣವಾಗಬೇಕು. ಅಗತ್ಯವಿರುವುದಕ್ಕಿಂತ ಹೆಚ್ಚು ಉಡಿಸಿಕೊಳ್ಳದೆ, ತಟ್ಟೆಯಲ್ಲಿ ಏನೂ ಉಳಿಸದೆ ಊಟ ಮಾಡುವ ವ್ರತ ಆಚರಿಸಿದರೆ ನಮಗರಿಯದ ಹಾಗೆ ಇನ್ನೊಂದು ಹಸಿದ ಹೊಟ್ಟೆಯನ್ನು ತುಂಬಿಸಿದ ಪುಣ್ಯ ಪ್ರಾಪ್ತಿ ನಮ್ಮದಾಗುತ್ತದೆ. ನಾಳೆ ನಮಗೆ ಸಿಗಲಿಕ್ಕಿಲ್ಲ ಎಂಬ ಭಯದಿಂದ ಇಂದು ಇದ್ದುದನ್ನೆಲ್ಲ ಕಟ್ಟಿಡುವ ಮನೋಧರ್ಮ ಸಹ್ಯವಾದುದಲ್ಲ. ಕಲ್ಲಿನೊಳಗಡಗಿದ ಕಪ್ಪೆಗೆ ಅಲ್ಲೇ ಉದಕವ ಕೊಡುವ ದೇವರು ಎಂಬ ಶಕ್ತಿ ನಮ್ಮೊಂದಿಗಿರುವಾಗ ನಾಳೆ ನಮಗೆ ಮಾತ್ರ ಏನೂ ಸಿಗದ ದುಃಸ್ಥಿತಿ ಬಂದೀತೆ?







## ಅನ್ನದ ಭಾಷೆ

- ಈರಯ್ಯ ಕಿಲ್ಲೇದಾರ *

ಎಲ್ಲ ಜೀವಿಗಳಿಗೂ ಆಹಾರ ಅಗತ್ಯವಾಗಿದೆ. ಗಾಳಿ, ನೀರು ಬಿಸಿಲಿನಂತೆ ಆಹಾರ ಸುಲಭವಾಗಿ ದೊರಕುವದಿಲ್ಲ. ಹಳ್ಳಿಯ ಜನರೂ 'ರೈಸ್ ಪ್ಲೇಟ್ ಕೊಡಿ' ಎನ್ನುತ್ತಾರೆ. 'ಊಟ ಕೊಡಿ' ಎನ್ನಲಾರದು. ಅನ್ನವನು ನೀಡುವುದು ಪುಣ್ಯದ ಕೆಲಸ ಆಗಿತ್ತು. ಈ ಭಾವನಾತ್ಮಕ ಸಂಬಂಧ ವ್ಯಾಪಾರದ ಸರಕು ಆಗಿದೆ. 'ಒಕ್ಕಲಿಗ ಒಕ್ಕದಿರೆ ಬಿಕ್ಕುವುದು ಜಗವೆಲ್ಲ' ಎಂಬ ಸರ್ವಜ್ಞನ ಮಾತೂ ಅರ್ಥಕಳೆದುಕೊಂಡಂತಿದೆ. 'ಕಾಗೆ ಒಂದಗುಳ ಕಂಡರೆ ಕೂಗಿ ಕರೆಯದೆ ತನ್ನ ಬಳಗವ?' ಎಂಬ ಬಸವಣ್ಣನವರ ವಚನದ ಉಕ್ತಿಯಂತೆ ಹಂಚಿಕೊಂಡು ಉಣ್ಣುವ ಸ್ವಭಾವಕ್ಕೆ ಬರಗಾಲ ಬಂದಿದೆ. ಇರುವೆಗಳು ಬೇಸಿಗೆಯಲ್ಲಿ ಆಹಾರ ಶೇಖರಿಸಿಟ್ಟು ಮಳೆಗಾಲದಲ್ಲಿ ತಿನ್ನುತ್ತವೆ. ಆಹಾರ ಭದ್ರತೆ ಅಥವಾ ಆಹಾರ ಸಾರ್ವಭೌಮತ್ವದ ಪಾಠ ಮನುಷ್ಯರಿಂದಷ್ಟೇ ಅಲ್ಲ, ಪ್ರಾಣಿ ಪಕ್ಷಿಗಳಿಂದಲೂ ಕಲಿಯಬಹುದಾಗಿದೆ. ಹೆಚ್ಚು ಅಂದರೆ ದಪ್ಪ ಆಗುವ, ಕಡಿಮೆ ತಿಂದರೆ ತೆಳುವು ಆಗುವ ಭಯ ಎಲ್ಲರನ್ನು ಕಾಡುತ್ತಿದೆ. ಆಹಾರ ಕೆಲವರಿಗೆ ಪ್ರದರ್ಶನದ ವಸ್ತು ಅಷ್ಟೇ ಏಕೆ ಪ್ರತಿಷ್ಠೆಯ ಸಂಕೇತ ಆಗಿದೆ. ಬದಲಾದ ಜೀವನಶೈಲಿಯಲ್ಲಿ ಆಹಾರದ ಪಾತ್ರ ಮಹತ್ವದ್ದಾಗಿದೆ. ಆಹಾರ ವಿಷ ಆಗಿ ರೂಪಾಂತರಗೊಂಡಿದೆ.

**'ಊಟ ಬಲ್ಲವನಿಗೆ ರೋಗ ಇಲ್ಲ'** ಎಂಬ ಗಾದೆ ಮಾತಿನಂತೆ, ನಮ್ಮ ದೇಹಕ್ಕೆ ಯಾವುದು ಸೂಕ್ತ, ಯಾವುದು ಹಿತ ಎಂಬ ವಿವೇಚನೆ ಬಹಳಷ್ಟು ಜನರಿಗಿಲ್ಲ. ಮಾರಕ, ಪೂರಕ ಮತ್ತು ಪೌಷ್ಟಿಕ ಆಹಾರ ಯಾವುದು? ಎಂಬುದರ ಬಗ್ಗೆ ತಲೆ ಕೆಡಿಸಿಕೊಂಡವರಿಲ್ಲ. ಉಣ್ಣುವ ಭಾಷೆ ಬೇರೆ ಆಗಿರುವುವಂತೆ ಅನ್ನದ ಭಾಷೆಯೂ ಬೇರೆ ಆಗಿದೆ. ಪರಿಚಿತ ಆಹಾರವನ್ನು ಬಣ್ಣದ ಭಾಷೆಯಲ್ಲಿ ತಿನ್ನುತ್ತಾರೆ. ಅನ್ನಕ್ಕೆ ಪ್ರಸಾದ ಎಂಬ ಗೌರವದ ಸ್ಥಾನ ಇದೆ. ಭಾಷೆಗೂ ಒಂದು ಅರ್ಥ ಇದೆ. ಮೌಲ್ಯವೂ ಇದೆ. ಭಾಷೆ ಎಂದರೆ ವಚನ ಮತ್ತು ಭರವಸೆ. ಅನ್ನದಾತ ಕೊಡುವ ಆಹಾರದಲ್ಲಿ ಮನುಷ್ಯ ಇದ್ದ. ಭಾಷೆ ಇತ್ತು. ಭವಿಷ್ಯವೂ ಇತ್ತು. ಭರವಸೆ ತುಂಬಿತ್ತು. ಕೆಲವರಂತೂ ಭಾಷೆಯ ಮಾಧ್ಯಮವನ್ನು ಅನ್ನದ ಭಾಷೆಗೆ ಹೋಲಿಸುವ ಅತಿರೇಕಕ್ಕೊಳಗಾಗುತ್ತಾರೆ. ಭಾಷೆಯೊಂದನ್ನು ಕಲಿಯುವುದರಿಂದ ಅಲ್ಲ. ಆಂಗ್ಲ ಮಾಧ್ಯದಲ್ಲಿ ಕಲಿಯುವುದರಿಂದ ಅನ್ನ ಸಿಗುವ ಸಾಧ್ಯತೆಯ ಬಗ್ಗೆ ಹೇಳುತ್ತಾರೆ. ಅದೆಷ್ಟು ನಿಜವೋ ಸುಳ್ಳೋ ತಿಳಿಯದು.

ಹಿಂದಿನ ದಿನ ಮಾಡಿದ ರೊಟ್ಟಿಯನ್ನು ಮರುದಿನ ಬೆಳಿಗ್ಗೆ ಎಣ್ಣೆ ಖಾರದ ಜೊತೆಗೆ ತಿನ್ನುತ್ತಿದ್ದರು. ಇಲ್ಲವೆ ಕೆನೆ ಮೊಸರು ಗುರೆಳ್ಳ ಚಟ್ನಿಯ ಜೊತೆಗೆ ತಿನ್ನುತ್ತಿದ್ದರು. ಅದರಲ್ಲಿದ್ದ ರುಚಿ ಸತ್ವ ಮತ್ತು ಶಕ್ತಿಯ ಬಗ್ಗೆ ತಿಂದವರ ಬಾಯಿಂದಲೇ ಕೇಳಬೇಕು. ಅದೆಲ್ಲಾ ಬರೀ ನೆನಪು. ತಂಗಳ ರೊಟ್ಟಿ ಅನ್ನ ಪಲ್ಯ ಮರುದಿನವೂ ತಿನ್ನಬಹುದಾಗಿತ್ತು. ಈಗ ಮುಂಜಾನೆ ಮಾಡಿದ್ದು ಮಧ್ಯಾಹ್ನ ಹಳಸಿರುತ್ತದೆ. ಅದೆಲ್ಲಾ ಸಾಧ್ಯವಾದದ್ದು ಜವಾರಿ ಬೀಜಗಳಿಂದ! ಹೈಬ್ರಿಡ್ ಅಥವಾ ಬಿಟಿ ತಳಿಯ ಬೀಜಗಳಿಂದಲ್ಲ. ಹಸಿರು ತರಕಾರಿ ಗಳನ್ನು 'ಬಾಳಕ' ಮಾಡಿ ವರ್ಷವಿಡೀ ಕೆಡದಂತೆ ಇಟ್ಟು ಬಳಕೆ ಮಾಡುತ್ತಿದ್ದರು. ತರಕಾರಿಗಳನ್ನು ನೆರಳಿನಲ್ಲಿ ಒಣಗಿ ಸುವುದೇ ಸಂಸ್ಕರಣೆ ಮಾಡುವುದಾಗಿತ್ತು. ಅದಕ್ಕೆ ರಾಸಾಯನಿಕಗಳ ಸೋಂಕಿರಲಿಲ್ಲ. ಕೃಷಿ ವಿಶ್ವವಿದ್ಯಾಲಯದ ತಜ್ಞರಾಗಲಿ, ವಿಜ್ಞಾನಿಗಳಾಗಲಿ, ಆಧುನಿಕ ತಂತ್ರಜ್ಞರೂ ಅವರಾಗಿರಲಿಲ್ಲ. ಹಂಚಿ ತಿನ್ನುವುದು ಅನ್ನದ ಭಾಷೆ. ಹಣ ವಿದ್ದವ ತಿನ್ನುವುದು ಆಹಾರದ ಭಾಷೆ ಆಗಿದೆ. ಅನ್ನಕ್ಕೆ ಜನರ ಸಂಬಂಧವನ್ನು ಬೆಸೆಯುವ ಶಕ್ತಿ ಇತ್ತು. ಕಬ್ಬಿನ ಗಾಣದ ಆಲೆಮನೆಗೆ ಹೋದವರಿಗೆ ಕಬ್ಬಿನಹಾಲು ಮತ್ತು ಬಿಸಿಬೆಲ್ಲ ಉಚಿತವಾಗಿ ಕೊಡುವ ಪದ್ಧತಿ ಇಂದಿಗೂ ಇದೆ. ಅನ್ನ ಭಾಷೆಯ ಸಾಧ್ಯತೆಗಳನ್ನು ತೆರೆದಿಡಬಲ್ಲದು. ಆಹಾರದ ಭದ್ರತೆಗೆ ಕಾನೂನು ರುಚಿಸುವ ಅಗತ್ಯ ಏರ್ಪಟ್ಟಿದ್ದು ಅನ್ನವನ್ನು ಹಣಕ್ಕೆ ಮಾಡುವ ವ್ಯವಸ್ಥೆಯಿಂದಾಗಿ. ಪವಿತ್ರ

* ಕವಿತಾ ಪ್ರಕಾಶನ, ಗುಡಿಕಟ್ಟೆ ಮತ್ತು ಅಂಚೆ - ೫೯೧ ೧೦೪. ಬೆಳಗಾವಿ ಜಿಲ್ಲೆ.

ನೀರು ಮೀನಿನ ಎಂಜಲು. ಹಾಲು ಕರುವಿನ ಎಂಜಲು. ಪಟ್ಟಿ ಉದ್ದಕ್ಕೆ ಬೆಳೆಯುತ್ತದೆ. ದೇವರಿಗೆ ಅರ್ಪಿಸಲು ಮೀಸಲು(ಎಂಜಲು ಇಲ್ಲದ್ದು) ಯಾವುದೂ ಇಲ್ಲ ಎಂದು ಜನಪದರು ಹೇಳಿದಂತೆ ವಿಷ ಇಲ್ಲದ್ದು ಯಾವುದೂ ಇಲ್ಲ. ದುಷ್ಟರ ಸಂಗದಂತೆ ರಾಸಾಯನಿಕ ವಿಷ ಬಳಕೆಯಿಂದ ಉಣ್ಣುವ ಊಟ, ತರಕಾರಿ, ಹಣ್ಣು, ಬೀಸುವ ಗಾಳಿ, ಕುಡಿಯುವ ನೀರು ಎಲ್ಲವೂ ವಿಷಮಯವಾಗಿದೆ. ಭಾಷೆಯಲ್ಲಿ ಆಗುವ ಬದಲಾವಣೆ ಭಾವದಲ್ಲಿ ಮತ್ತು ಅನುಭವದಲ್ಲೂ ಆಗುವಂತೆ ಆಹಾರ ವಿಹಾರದಲ್ಲಾದ ಬದಲಾವಣೆ, ದೇಹ ಮತ್ತು ಮನಸ್ಸುಗಳ ಮೇಲೂ ಆಗುತ್ತದೆ. ಮನುಷ್ಯ ಏನನ್ನು ತಿನ್ನುತ್ತಾನೋ ಅದೇ ಆಗುತ್ತಾನೆ. ಅನ್ನ ಬೆಳೆಯುವ ಜೀವನ ಕ್ರಮಕ್ಕೆ ಚ್ಯುತಿ ಬಂದಿದೆ. ಆದರೆ ಬೆಳೆ ಬರುವದೆಂದು ನಂಬಿದವರು ಇಂದಿಗೂ ಬಿತ್ತುವುದನ್ನು ಬಿಟ್ಟಿಲ್ಲ. ನೆಟ್ಟ ಬೀಜ ಸಸಿಯಾಗಿ, ನಾಳೆ ತೆನೆ ಮೂಡುವುದೆನ್ನುವ ಕನಸನ್ನು ರೈತರಿಂದ ಕಸಿಯಲು ಯಾರಿಂದಲೂ ಸಾಧ್ಯವಿಲ್ಲ. ರೈತರೇನೋ ಬೆಳೆಯುತ್ತಾರೆ. ರೈತರು ಬೆಳೆದ ಕಾಳು, ತರಕಾರಿ ಮತ್ತು ಹಣ್ಣು ಹಂಪಲು ನೇರವಾಗಿ ಉಣ್ಣುವ ಬಾಯಿಗೆ ಹೋಗುವುದಿಲ್ಲ. ಅದು ಫಾಸ್ಟ್ ಫುಡ್ ಇದ್ದೀತು. ಡ್ರಾಯ್ ಫುಡ್ ಇದ್ದೀತು. ಆಹಾರದ ಸಂಸ್ಕರಣೆಯ ಹೆಸರಿನಲ್ಲಿ ರೂಪಾಂತರ ಹೊಂದಿ ಅನ್ನ ಫುಡ್ ಆಗುವುದು. ರೊಟ್ಟಿ ಬ್ರೆಡ್ ಆಗುವುದು. ರಸ ಜ್ಯೂಸ್ ಆಗುವುದು. ಆಕರ್ಷಕವಾದ ಪ್ಯಾಕಿಂಗ್ ಮೂಲಕ ಪೊಟ್ಟಣಗಳಲ್ಲಿ ಬಂಧಿ ಆಗುತ್ತವೆ. ಏನು ತಿನ್ನುತ್ತೇವೆ ಎನ್ನುವುದಕ್ಕಿಂತ ಎಷ್ಟು ತಿನ್ನುತ್ತೇವೆನ್ನುವುದಕ್ಕಿಂತ ಎಷ್ಟು ಹಣ ಕೊಡುತ್ತೇವೆ ಎನ್ನುವುದು ಮುಖ್ಯವಾಗುತ್ತದೆ.

ಕೃಷಿ ಎಂಬುದು ಮಾರುಕಟ್ಟೆ ಪ್ರೇರಿತ ಮತ್ತು ಮಾರುಕಟ್ಟೆ ಆಧಾರಿತ ವಿಜ್ಞಾನ ಆಗಿದೆ. ವಿಕಾಸ ಮತ್ತು ಬೆಳೆಯುವ ಪ್ರಕ್ರಿಯೆ ವಿಜ್ಞಾನಕ್ಕೆ ಪ್ರೇರಕ ಆಗಬೇಕಿತ್ತು. ಆದರೆ ಪ್ರಕೃತಿಯನ್ನು ವಿಕೃತಿಗೊಳಿಸುವುದೇ ವೈಜ್ಞಾನಿಕಗೊಳಿಸುವುದು ಎಂಬ ಭಾಷೆ ಬಳಕೆ ಆಗುತ್ತಿದೆ. ಕೃಷಿಕರ ಬಗೆಗಾಗಲಿ ಕೃಷಿಯ ಬಗ್ಗೆಗಾಗಲಿ ರೈತರ ಬದುಕಿನ ಶ್ರಮ ಹಿನ್ನಲೆಯಲ್ಲಿ ಆಲೋಚನೆಗಳು ಹುಟ್ಟುತ್ತಿಲ್ಲ. ಹುಟ್ಟಿದ್ದರೂ ರೈತರ ಬದುಕಿನ ಅಂಗವಾಗುತ್ತಿಲ್ಲ. ಆಲೋಚನೆ ಮತ್ತು ಪರಿಹಾರಗಳು ಬೀಜ ಮೊಳೆಯಲು ಸಸಿಯಾಗಿ ಬೆಳೆಯಲು ನೀರು ಗೊಬ್ಬರ ವಾಗಿ ರೈತರ ಮನಸ್ಸಿಗೆ ತಾಕತ್ತನ್ನು ಎರೆಯಬೇಕಾಗಿದೆ. 'ಹೆಚ್ಚು ಬೆಳೆಯಿರಿ' ಎಂದು ಪಾಠ ಹೇಳುವ ಮೂಲಕ ರೈತರ ಬದುಕು ಹಸನಾಗಲಿಲ್ಲ. ರೈತರ ಬದುಕೆಂದರೆ ಪಾಠ ಹೇಳಿದಂತೆ ಬೆಳೆ ಬೆಳೆಸುವುದಲ್ಲ. ಅದರಾಚೆಗೂ ಇದೆ ಎಂಬುದರ ಅರಿವು ಬೇಕು. ರೈತರ ಪ್ರತಿದಿನದ ಬದುಕನ್ನು ಪ್ರತಿಭಟನೆಯಿಂದ ಬೇರ್ಪಡಿಸಲಾರದ ಸ್ಥಿತಿ ಇಂದಿನದು.

ಕಂಪನಿಗಳು ಅದರಲ್ಲೂ ಕಾರ್ಪೋರೇಟ್ ಕಂಪನಿಗಳು ಹೊಸ ತಂತ್ರಜ್ಞಾನ ಅಭಿವೃದ್ಧಿಪಡಿಸಿ ರೈತರ ಬದುಕನ್ನು ಹಸನುಗೊಳಿಸುವುದಾಗಿ ಹೇಳುತ್ತವೆ. ಆದರೆ ತನ್ನ ತಂತ್ರಜ್ಞಾನಕ್ಕೆ ಪೇಟೆಂಟ್ ಪಡೆದು, ಅಧಿಕ ರಾಯಲ್ಟಿ ಪಡೆದು, ದುಬಾರಿ ಬೆಲೆಗೆ ತಂತ್ರಜ್ಞಾನವನ್ನೋ, ಬೀಜವನ್ನೋ ಮತ್ತು ರಾಸಾಯನಿಕ ಕೀಟನಾಶಕಗಳನ್ನೋ ಮಾರಾಟ ಮಾಡಿ ಶ್ರೀಮಂತಿಕೆಯ ಶಿಖರ ಏರುತ್ತವೆ. ಕಾರ್ಪೋರೇಟ್ ಕಂಪನಿಗಳು ರಾಜಕಾರಣಿಗಳಿಗೆ ಹಣಕೊಟ್ಟು ತಮ್ಮ ಪರವಾದ ಕಾನೂನುಗಳನ್ನು ಬರೆಸುತ್ತವೆ. ಸಸ್ಯಗಳನ್ನು ಬೆಳೆಸಲು ಅವುಗಳಿಗೆ ಬರುವ ಕೀಟ ಮತ್ತು ರೋಗ ನಿಯಂತ್ರಿಸಲು, ಕಳೆನಾಶಕ ಬಳಸಲು ಶಿಫಾರಸ್ಸು ಮಾಡುವುದರಿಂದ ಮನುಷ್ಯ ಮತ್ತು ದನಕರುಗಳಿಗೆ ರೋಗ ಹೆಚ್ಚಿಸಲು ಕೀಟಗಳ ವೃದ್ಧಿಗೆ ಕಾರಣವಾಗುವುದು ವಿಜ್ಞಾನ ಆಗಬೇಕಿಲ್ಲ. ವಿಪರೀತ ಸಂಖ್ಯೆಯಲ್ಲಿ ಕೀಟಗಳು, ಸೊಳ್ಳೆಗಳು ವೃದ್ಧಿಯಾಗಿದ್ದು ವೈಜ್ಞಾನಿಕ ವಿಷಗಳಿಂದ! ವೈಜ್ಞಾನಿಕ ಆವಿಷ್ಕಾರಗಳಿಂದ! ಮತ್ತು ನಿಸರ್ಗದ ವಿರುದ್ಧದ ಹೋರಾಟದಿಂದ! ಎಚ್1ಎನ್1, ಡೇಂಗೀಜ್ವರ, ಮಲೇರಿಯಾ, ಟೈಫಾಯ್ಡ್, ಕ್ಯಾನ್ಸರ್ ಒಂದೇ ಎರಡೇ ಹೇಳಲು ಹೆಸರು ಸಾಲದಷ್ಟು ರೋಗಗಳು ಮನುಷ್ಯರನ್ನು ಬಾಧಿಸುತ್ತಿವೆ. ಇದೇ ಕಾರ್ಪೋರೇಟ್ ಕಂಪನಿಗಳು ರೋಗಕ್ಕೆ ಪರಿಹಾರವೆಂದು ಮನುಷ್ಯರಿಗೆ, ಪ್ರಾಣಿಗಳಿಗೆ ಔಷಧಿ, ಲಸಿಕೆ, ಇಂಜೆಕ್ಷನ್ ತಯಾರಿಕೆ ಮಾಡಿ ಮಾರಾಟ ಮಾಡುತ್ತವೆ. ಈ ಔಷಧಿಗಳು ಒಂದು ರೋಗ ವಾಸಿ ಮಾಡಿ ಎರಡು ರೋಗಗಳ ಬೇರು ಬಿಡುತ್ತವೆ.

ಅಕ್ಕಿಯನ್ನೇ ತೆಗೆದುಕೊಳ್ಳಿ ಎರಡೆರಡು ಸಲ ಪಾಲಿಶ್ ಮಾಡಿ ಸತ್ವವುಳ್ಳ ಕವಚವನ್ನು ತೆಗೆದು ಮಲ್ಲಿಗೆಯಂತೆ ಅಕ್ಕಿಗೆ ಹೊಳಪು ನೀಡಲಾಗುತ್ತದೆ. ಖಾದ್ಯತೈಲಗಳನ್ನು ಎರಡು ಸಲ ರಿಫೈನ್ ಮಾಡಲಾಗುವುದು. ಹಣ್ಣುಗಳಿಗೆ ಕೃತಕ ಬಣ್ಣ ಬರಿಸಿ ಅಲ್ಲ ಅಲ್ಲ, 'ಕಸುಗಾಯಿ ಹಿಸುಕಿ' ಕ್ಯಾಲ್ಷಿಯಂ ಕಾರ್ಬಾಯಿಡ್‌ನಂತಹ ವಿಷ ಸಿಂಪಡಿಸಿ ಹಣ್ಣು ಮಾಡಿ





ಮಾರಲಾಗುತ್ತಿದೆ. ಮೌಲ್ಯವರ್ಧನೆಯ ಹೆಸರಿನಲ್ಲಿ ರುಚಿ ಬಣ್ಣ ಕೆಡಿಸಿ, ಆಕರ್ಷಕ ಪಾಕೆಟ್‌ಗಳಲ್ಲಿ ಪ್ಯಾಕೇಜ್ ಮೂಲಕ ಜಾಹಿರಾತುಗೊಳಿಸಿ, ಜನಪ್ರಿಯ ಮಾಡಿ ಕೊಳ್ಳುಬಾಕತನಕ್ಕೆ ಪ್ರೇರಣೆ ನೀಡಲಾಗುವುದು. ಅರ್ಧ ಸತ್ಯವನ್ನು ಅಥವಾ ಸುಳ್ಳನ್ನು ಸತ್ಯವೆಂಬಂತೆ ಸಾವಿರ ಸಾವಿರ ಬಾರಿ ಪ್ರಚಾರ ಮಾಡುತ್ತಾರೆ. ಕೋಟಿ ಕೋಟಿ ಜನರಲ್ಲಿ ಲಕ್ಷದಷ್ಟು ಜನರಾದರೂ ಪ್ರಚಾರಕ್ಕೆ ಮರುಳಾಗುತ್ತಾರೆ. ನಿಜವೆಂದೇ ನಂಬುತ್ತಾರೆ, ಖರೀದಿಸುತ್ತಾರೆ. ಗಿರಾಕಿಗಳಾಗುತ್ತಾರೆ. ನೈಸರ್ಗಿಕವಾಗಿ ಪಕ್ವವಾದ ಮಾವಿನಕಾಯಿ ಕೊಯ್ದು ಜುರಿ (ಕಾಯಿಯ ತುದಿಯಿಂದ ಸೋರುವ ರಸ) ನೆಲಕ್ಕೆ ಬೀಳುವಂತೆ ಮಾಡಿ ಒಣಗಿದ ಕರಡ(ಕಡ್ಡ) ಮತ್ತು ಭತ್ತದ ಹುಲ್ಲಿನಲ್ಲಿಟ್ಟು ಒಂದು ವಾರದ ನಂತರ ನೈಸರ್ಗಿಕ ಬಣ್ಣ ಹಾಗೂ ರುಚಿ ಮತ್ತು ವಾಸನೆಯುಳ್ಳ ಹಣ್ಣಿನ ಶೀಕರಣೆಗೂ ರಾಸಾಯನಿಕ ಬಳಸಿ ಒಂದೇ ದಿನದಲ್ಲಿ ಕೃತಕ ಬಣ್ಣ ಬರಿಸಿ ಮಾಡಿದ ಹಣ್ಣಿನ ಜ್ಯೂಸ್‌ಗೂ ಇರುವ ವ್ಯತ್ಯಾಸ ಜನರಿಗೆ ತಿಳಿಯಬೇಕಿದೆ.

ಜನ ಮರುಳೋ ಜಾತ್ರೆ ಮರುಳೋ ಎಂಬಂತೆ ಜಾಹೀರಾತಿನ ಮಾಯೆಗೆ ಮರುಳಾಗಿದ್ದಾರೆ. ಮನುಷ್ಯ ನೋಟದಿಂದ ತಿನ್ನಲಾರ. ಕಣ್ಣಿನಿಂದ ರುಚಿ ತಿಳಿಯದು. ಹಸು ಮತ್ತು ಎಮ್ಮೆಗಳ ನೊರ ಹಾಲಿಗೂ ಡೇರಿ ಹಾಲಿಗೂ ಇರುವ ವ್ಯತ್ಯಾಸ ಗ್ರಾಹಕರಿಗೆ ತಿಳಿಯದ ಸಂಗತಿಯೇನಲ್ಲ. ವಿಟಮಿನ್‌ಗಳು ಮತ್ತು ಪೌಷ್ಠಿಕಾಂಶಗಳು ನೈಸರ್ಗಿಕವಾದವುಗಳಿಗಿಂತ ಕೃತ್ರಿಮವಾದವುಗಳು ಎಂಥಾವು? ಎಂಬುದರ ಅರಿವು ಜಾಗೃತಿ ಮೂಡಿಸಬೇಕಿದೆ. ಅತಿ ಹೆಚ್ಚು ಜಾಹಿರಾತುಗೊಳ್ಳುವ ಆಹಾರ ಸಾಮಾಗ್ರಿಗಳು ಆರೋಗ್ಯಕ್ಕೆ ಅತಿ ಹೆಚ್ಚು ಹಾನಿಕಾರಕ ಎಂದು ಯಾವ ತಜ್ಞವೈದ್ಯರೂ ಸ್ಪಷ್ಟಪಡಿಸಲಾರರೇನೋ. ಜಾಹೀರಾತಿನ ಮೂಲಕ ಜನರನ್ನು ತನ್ನತ್ತ ಸೆಳೆಯುವ ಜರೂರತ್ತ ಏನಿದ್ದೀತು? ಕೃಷಿ ತಂತ್ರಜ್ಞಾನ, ಸಾಂಪ್ರದಾಯಿಕ ಜ್ಞಾನ ಮತ್ತು ಆಹಾರದ ಬಳಕೆ ಕುರಿತಂತೆ ಕೃಷಿಕರು ಬಳಕೆದಾರರು ಮತ್ತು ಜನರ ಗ್ರಹಿಕೆ ಬದಲಿಸಲು ಆಂದೋಲನವೇ ನಡೆಯಬೇಕಿದೆ. ಸಾಂಪ್ರದಾಯಿಕ ಜ್ಞಾನ ಮತ್ತು ವೈಜ್ಞಾನಿಕ ವಿವೇಚನೆಯ ಸಮನ್ವಯವೂ ಅಗತ್ಯವಾಗಿದೆ. ಅನ್ನದ ಭಾಷೆ ಮತ್ತು ವ್ಯಾಖ್ಯೆ ಹೇಗಾಗಿದೆ ಎಂದರೆ 'ಹಸಿದವ ಹಲ್ಲು ತೋರಿಸಿದರೆ ಉಂಡವ ಹೆಂಡೆ ತೋರಿಸಿದ' ಎಂಬಂತಾಗಿದೆ.

## ಕವಿಮಾತು

| | | |
|---|---|---|
| ಸ್ವೀಕರಿಸುವ ಮನಸ್ಸಿದ್ದರೆ | : | ಸದ್ಗುಣಗಳನ್ನು ಸ್ವೀಕರಿಸುವ |
| ಈಜುವ ಮನಸ್ಸಿದ್ದರೆ | : | ಜ್ಞಾನಸಾಗರದಲ್ಲಿ ಈಜು |
| ನಡೆಯುವ ಮನಸ್ಸಿದ್ದರೆ | : | ಸನ್ಮಾರ್ಗದಲ್ಲಿ ನೆಡೆ |
| ಮಾತನಾಡುವುದಾದರೆ | : | ಸದಾಚಾರದ ನುಡಿಗಳನ್ನು ನುಡಿ |
| ಹಾಡುವುದಾದರೆ | : | ಭಗವಂತನ ನಾಮವ ಹಾಡು |
| ಕೇಳುವುದಾದರೆ | : | ಸದುಪದೇಶಗಳನ್ನು ಕೇಳು |
| ದೊರಕಿಸುವುದಿದ್ದರೆ | : | ಜಯವನ್ನು ದೊರಕಿಸು |
| ನುಂಗುವ ಇಚ್ಛೆಯಿದ್ದರೆ | : | ಸಿಟ್ಟನ್ನು ನುಂಗು |
| ತ್ಯಜಿಸುವುದಿದ್ದರೆ | : | ದುರ್ಗುಣಗಳನ್ನು ತ್ಯಜಿಸು |

# ಪ್ರಾರ್ಥನಾಯೋಗ ಅಚಿಂತ್ಯಶಕ್ತಿಯ ಆಸರ

– ಶ್ರೀ ಕುಮಾರಸ್ವಾಮಿಗಳವರು *

**ಈ** ಸುಂದರವಾದ ನಿತ್ಯನೂತನವಾದ ನಿಜೈಕ್ಯಮತವಾದ ಯೋಗದ ಅರ್ಥದ ಬೆಳಕಿನಲ್ಲಿ ಪ್ರಾರ್ಥನಾಯೋಗವನ್ನು ನೋಡೋಣ. ಪ್ರಾರ್ಥನೆಯೂ ಒಂದು ಯೋಗವು ಆವಾಗ ಆಗುವುದು? ಪ್ರಾರ್ಥನೆಯೂ ಒಂದು ಕರ್ಮವಲ್ಲವೆ? ಈ ಪ್ರಾರ್ಥನೆಯನ್ನೂ ಒಂದು ಹತೋಟಿಯಿಂದ ಹಿಡಿತದಿಂದ ಹದದಿಂದ ಹಂಚಿಕೆಯಿಂದ ಚೂಟಿಯಿಂದ ಅರ್ಥಾತ್ ಕುಶಲತೆಯಿಂದ ಮಾಡಬೇಕು. ಅದುವೇ ಪ್ರಾರ್ಥನಾಯೋಗ. ಪ್ರಾರ್ಥನೆಯ ಜ್ಯೇಷ್ಠವಾದ ಶ್ರೇಷ್ಠ ವಾದ, ಮಡಿಯಾದ ಮಿಗಿಲಾದ ಉಪಾಯವನ್ನು ತಿಳಿದು ಮಾಡಬೇಕು. ಇದಕ್ಕೆ ಒಂದು ಸಿದ್ಧಾಂತ ಒಂದು ಸಾಧನೆ, ಒಂದು ಸಂಪಾದನೆಯುಂಟು. ಇದನ್ನು ತಿಳಿದುಕೊಂಡು ಪ್ರಾರ್ಥನೆ ಮಾಡಬೇಕು. ಪ್ರಾರ್ಥನೆಯ ಶಬ್ದಶಃ ಅರ್ಥವು 'ಬೇಡುವುದು' ಎಂದಾಗುತ್ತದೆ. ಹಾಗೆ ಬೇಡುವುದಾದರೆ 'ಹೇಗೆ ಬೇಡುವುದು? ಏನನ್ನು ಬೇಡುವುದು? ಎಷ್ಟು ಬೇಡುವುದು? ಯಾವಾಗ ಬೇಡುವುದು? ಯಾರನ್ನು ಬೇಡುವುದು? ಏಕೆ ಬೇಡುವುದು? ಎಂಬ ಮಾತುಗಳು ಅತ್ಯಂತ ಗಮನಾರ್ಹವಾಗಿವೆ, ಎಂತಲೇ ವಿಚಾರಾರ್ಹ ವಾಗಿವೆ. 'ಯಾರನ್ನು ಬೇಡುವುದು?' ಎಂಬ ಪ್ರಶ್ನೆಯೇ ಪ್ರಾರ್ಥನೆಯಲ್ಲಿ ಮುಖ್ಯವಾಗಿದೆ.

ನಿಜವಾಗಿಯೂ ಪ್ರಾರ್ಥನೆಯು ಒಂದು ಅನನ್ಯವಾದ ಆಸಕ್ತಿ ಭಾವನೆ ಇಲ್ಲವೆ ಧಾರ್ಮಿಕ ಭಾವನೆಯಿಂದಲ್ಲದೆ ಸಾಧ್ಯವೇ ಇಲ್ಲ. ಈ ಮಾತನ್ನು ನಾವು ಸದಾ ಸ್ಮೃತಿಪಟಲದ ಮೇಲೆ ಕೊರೆದಿಟ್ಟುಕೊಂಡಿರಬೇಕು. ಮಾನವನು ಒಮ್ಮೊಮ್ಮೆ ತಾನೆಣಿಸದಿದ್ದ, ತನಗೆ ಯಾವ ಕಾಲಕ್ಕೂ ಸಾಧ್ಯವಾಗದ ಕೆಲವು ಅದ್ಭುತ ಅವರ್ಣನೀಯ ಕಾರ್ಯಗಳನ್ನೆಸಗಿ ಬಿಡುತ್ತಾನೆ. ಆ ಕಾಲಕ್ಕೆ ಆ ಕಾರ್ಯಗಳು ಹೇಗಾದವು ಎಂತಾದವು ಎಂಬುದನ್ನು ವಿಚಾರಿಸಿಕೊಂಡಾಗ ಅವನಿಗೆ ದಂಗು ಬಡಿಯುತ್ತದೆ; ಅವನು ದಿಙ್ಮೂಢನಾಗುತ್ತಾನೆ. 'ನಿಜವಾಗಿಯೂ ಈ ಕಾರ್ಯವನ್ನು ಯಾರೋ ನನ್ನಿಂದ ಮಾಡಿಸಿರಲೇಬೇಕು; ಇದು ನನ್ನಿಂದ ಸರ್ವಥಾ ಸಾಧ್ಯವಿಲ್ಲ! ಎಂದು ಅವನು ಉದ್ಗಾರ ತೆಗೆಯುತ್ತಾನೆ. ಹಾಗಾದರೆ ಆ 'ಯಾರು' ಯಾವದಿರಬಹುದು? ಯಾವುದೋ ಒಂದು ಅದ್ಭುತ ಅನುಪಮ ಅವರ್ಣನೀಯ ಅಗಮ್ಯ ಅಚಿಂತ್ಯ ಅತುಲ ಶಕ್ತಿಯಾಗಿದೆ ಅದು. ಈ ಶಕ್ತಿಯೇ ಮಾನವನ ಅದ್ವಿತೀಯ ಘಟನೆಗಳಿಗೆಲ್ಲ ಹಿನ್ನಲೆಯಾಗಿ ನಿಂತುಕೊಂಡು ಅವನ್ನು ಮಾಡಿಸುತ್ತದೆಂದು ನಿಧಾನವಗಿ ಸಾವಧಾನದಿಂದ ವಿಚಾರಿಸುವ ಪ್ರತಿಯೊಬ್ಬನಿಗೂ ಅನ್ನಿಸದಿರದು. ಈ ಅಚಿಂತ್ಯವಾದ ಶಕ್ತಿಯನ್ನು ಧರ್ಮವು ಒಪ್ಪಿಕೊಳ್ಳುತ್ತದೆ. ವಿಜ್ಞಾನವೂ ಅಪ್ಪುತ್ತದೆ. ಆದರೆ ಈ ಶಕ್ತಿಯನ್ನು ತಿಳಿದುಕೊಳ್ಳುವ ಧರ್ಮ ವಿಜ್ಞಾನಗಳ ದೃಷ್ಟಿಕೋನಗಳಲ್ಲಿ ಮಾತ್ರ ಬಹಳ ಅಂತರವಿದೆ ಧರ್ಮವು 'ಈ ಶಕ್ತಿಯು ಅರುಹಿನಿಂದ ಕೂಡಿದ್ದಾಗಿದೆ, ಚೇತನಮಯವಾಗಿದೆ, ಸರ್ವಸಾಕ್ಷಿಯಾಗಿದೆ. ಸರ್ವಾಂತರ್ಯಾಮಿಯಾಗಿದೆ 'ಸರ್ವ ಕರ್ಮಫಲ ಪದವಿದಾತಾ' ಆಗಿದೆ– ಎಂದು ಸ್ಪಷ್ಟವಾಣಿಯಲ್ಲಿ ಹೇಳುತ್ತದೆ. ಆದರೆ ವಿಜ್ಞಾನವು 'ಶಕ್ತಿಯು ಅಂಧವಾಗಿದೆ, ಕುರುಡಾಗಿದೆ' ಎಂದು ತಿಳಿಸುತ್ತದೆ. ಅಯ್ಯೋ! ಈ ಅಚಿಂತ್ಯ ಶಕ್ತಿಯ ಬಗೆಗಿನ ವಿಜ್ಞಾನದ ಈ ವಿನೂತನ ದೃಷ್ಟಿಯಿಂದ ಅದೆಂಥ ಹಾನಿಕಾರಕ ಪರಿಣಾಮವಾಗುತ್ತದೆಯಲ್ಲಾ! ಇಲ್ಲಿ ಪಾಪ–ಪುಣ್ಯಗಳ ಅರಿವೇ ಹಾರಿಹೋಯಿತು! ಆದರೆ ಧರ್ಮದ ವಿಮಲದೃಷ್ಟಿಯಿಂದ ಅದೆಂಥ ಪ್ರಯೋಜನವೂ ಮಾನವಕುಲಕ್ಕೆ ಆಗುತ್ತಿದೆ ನೋಡಿ! ಆ ಅಚಿಂತ್ಯಶಕ್ತಿಯು ಸರ್ವಾಂತರ್ಯಾಮಿಯಾಗಿರುವುದರಿಂದ ನಾವು ಮಾಡುವ ಬಿಡುವ ಪ್ರತಿಯೊಂದು ಕೆಲಸವನ್ನು ಅದು ನೊಡುತ್ತದೆ! ಇಲ್ಲಿ ಪಾಪ ಪುಣ್ಯ, ನೀತಿ ಅನೀತಿ, ನ್ಯಾಯ ಅನ್ಯಾಯ, ಧರ್ಮಾ ಧರ್ಮಗಳ ಕಲ್ಪನೆಯು ನಿತ್ಯಜಾಗೃತವಾಗಿದೆ! ಧರ್ಮ ದೃಷ್ಟಿಯಿಂದ ಪಾಪಭೀರುತ್ವವೂ ಪುಣ್ಯಪ್ರವೃತ್ತಿಯೂ ಮಾನವನಿಗೆ ಅಮೂಲ್ಯ ದೇಣಿಗೆಗಳಾಗಿ ದೊರಕುತ್ತದೆ. ಈ ಶಕ್ತಿಯನ್ನು ನೀವು ಯಾವ ಹೆಸರಿನಿಂದಾದರೂ ಕರೆದುಕೊಳ್ಳಿರಿ. ಅದೇನು ಬಹಳ

* ನವಕಲ್ಯಾಣಮಠ, ಧಾರವಾಡ.





ಮಹತ್ವದ ವಿಷಯವಲ್ಲ. ನಾವೂ ಈಗ ಅದಕ್ಕೆ ದೇವನೆಂದೋ ದೇವಾಧಿದೇವನೆಂದೋ ಕರೆಯುತ್ತೇವೆ; ಕರೆಯೋಣ ಆ ದೇವಾಧಿದೇವನ ವರ್ಣನೆಯನ್ನು ಶ್ರೀ ಬಸವಣ್ಣನವರು ಕೆಳಗಿನ ವಚನದಲ್ಲಿ ಬಹು ಸುಂದರವಾಗಿ ಮಾಡಿದ್ದಾರೆ.

*ಧರಣಿಯ ಮೇಲೊಂದು ಹಿರಿದಿಪ್ಪ ಅಂಗಡಿಯನಿಕ್ಕಿ ಹರದ*
*ಕುಳ್ಳಿರ್ದ ನಮ್ಮ ಮಹದೇವಶೆಟ್ಟಿ*
*ಒಮ್ಮನವಾದರೆ ಒಡನೆ ನುಡಿವನು;*
*ಇಮ್ಮನವಾದರೆ ನುಡಿಯನು.*
*ಕಾಣಿಯ ಸೋಲ : ಅದ್ದಗಾಣಿಯ ಗೆಲ್ಲ!*
*ಜಾಣ, ನೋಡವ್ವಾ ನಮ್ಮ ಕೂಡಲಸಂಗಮದೇವ!*

ಈ ಜಗತ್ತೆಂಬ ಒಂದು ದೊಡ್ಡ ಪೇಟೆಯಲ್ಲಿ ದೇವಾಧಿದೇವನು ಒಂದು ಹಿರಿದಿಪ್ಪ ಅಂಗಡಿಯನ್ನಿಕ್ಕಿದ್ದಾನೆ. ಭಾರಿ ವ್ಯಾಪಾರ ನಡೆದಿದೆ. ಅದರೆ ಗಿರಾಕಿಗಳ ಕೂಡ ಅವನ ವ್ಯವಹಾರವು ಹೇಗೆ? 'ಒಮ್ಮನವಾದರೆ ಒಡನ ನುಡಿದನು; ಇಮ್ಮನವಾದರೆ ನುಡಿಯನು. ಹೃದಯದಲ್ಲಿ ಎರಡಿಲ್ಲದಿರಬೇಕು. ಅಂದರೆ ಮಾತ್ರ ಮುಂದಿನ ವ್ಯವಹಾರ! ಸೇರಿಗೆ ಮುಕ್ಕಾಲು ಸೇರಿನ ಮಾರಾಟವು ಆತನದಲ್ಲ! ಹಾಗೆಯೇ ಗ್ರಾಹಕರಿಂದ ಐದು ಕಾಲು ಸೇರು ತೆಗೆದುಕೊಳ್ಳುವವನಲ್ಲ. ಕಾಣಿಯ ಸೋಲ; ಅದ್ದಗಾಣಿಯ ಗೆಲ್ಲ! ಇದು ಆ ಅಚಿಂತ್ಯ ಶಕ್ತಿಯ ಅಥವಾ ನಾವು ಕರೆಯುವಂತೆ ಆ ದೇವಾಧಿದೇವನ, ಪ್ರಭುವಿನ ಯಥಾವತ್ತಾದ ಶಬ್ದಚಿತ್ರಣವು. ಪ್ರಭುಶಕ್ತಿಯಾದ ನ್ಯಾಯದೇವತೆಯು ಅಚಿಂತ್ಯವಾದ ಸಮತೂಕದಿಂದ ಜಗತ್ತನಾಳುವಳು. ಅವರವರು ಎಸಗುವ ಕರ್ಮಕ್ಕೆ ತಕ್ಕ ಫಲವನ್ನು ಎಳ್ಳನಿತು ಕೊರೆತೆಯಿಲ್ಲದಂತೆ ನೀಡುವುದು ಎಂಬುದು ನಿತ್ಯಸತ್ಯವಾಗಿದೆ. ಸಕಲ ವ್ಯಾಪಾರಗಳೂ ಮಾನವ ಜಗತ್ತಿನ ಸರ್ವ ಕರ್ಮಗಳಿಗೂ ಸಾಕ್ಷಿಯಾಗಿದ್ದ ಈ ದೃಷ್ಟಿಯ ನ್ಯಾಯದೇವತೆ ಸದಾ ನ್ಯಾಯನಿರ್ಣಯವನ್ನು ನೀಡುತ್ತ ಈ ವಿಶ್ವದಲ್ಲಿ ವಿರಾಜಿಸುತ್ತಿದೆ. ಎಂತಲೇ ಈ ವಿಶ್ವದ ಗತಿಯು ಪ್ರಗತಿಪಥದಲ್ಲಿ ಸಾಗಿದೆ. ಆದ್ದರಿಂದ ಅಚಿಂತ್ಯವಾದ ಸಮಸ್ತ ಸೃಷ್ಟಿಯನ್ನು ವ್ಯಾಪಿಸಿದ ಆ ಶಕ್ತಿಯಲ್ಲಿ ಶ್ರದ್ಧೆ ಇರಬೇಕು. ಮಾನವನಲ್ಲಿ ಕಾಲಕಾಲಕ್ಕೆ ಉಂಟಾಗುವ ಸಂಶಯ ನಿವಾರಣೆಗಾಗಿ, ಅವನ ಬುದ್ಧಿಯನ್ನು ತಣಿಸುವುದಕ್ಕಾಗಿ ಮಾತ್ರ ಶಾಸ್ತ್ರ ಸಹಾಯ ಮಾಡಿತು. ಆದರೆ ಶಾಸ್ತ್ರದ ತೊಡಕಿಗೆ ಸಿಲುಕಿ ಪ್ರಭುವಿನ ಅಸ್ತಿತ್ವವನ್ನು ಸಿದ್ಧಮಾಡಹೋಗುವುದಕ್ಕಿಂತ ಅನುಭಾವಿಗಳ ಅನುಭವದ ಮಾತಿನಿಂದ ಅವನ ಅಸ್ತಿತ್ವವನ್ನು ಒಪ್ಪಿಕೊಳ್ಳುವುದು ವಿಹಿತ. ಇಂಥ ಪ್ರಭುವಿನಲ್ಲಿ ಆವೊಂದು ನ್ಯೂನತೆಯಿಲ್ಲದ, ನಿರಂತರ ನಿತ್ಯ ನವೀನವಾದ, ನಿರುಪಮವಾದ, ನಿರರ್ಗಳವಾದ ನಂಬಿಗೆ ನಿಷ್ಠೆಗಳು ನೆಲೆಗೊಂಡ ಹೊರತು ಪ್ರಾರ್ಥನೆಗೆ ಇಂಬಿಲ್ಲ; ಒಂದು ವೇಳೆ ಪ್ರಾರ್ಥನೆ ಮಾಡಿದರೆ, ಅದು ಪ್ರಯೋಜನಕಾರಿಯೂ ಆಗಲಾರದು.

## ಶ್ರೀವಾಣಿ

ಸುಮಾರು ಎಂಟುನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದು ಅವುಗಳನ್ನು ಅಳವಡಿಸಿ ಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

# ವಿವೇಕ ಮತ್ತು ಮೂರ್ಖತನ

– ಎಂ. ಮಾಧವ ಪೈ *

*ಆಹಾರ ನಿದ್ರಾ ಭಯ ಮೈಥುನಾನೀ ಚೈತಾನಿ ನೃಣಾಂ ಪಶುನಾಮ ।*
*ಜ್ಞಾನಂ ನಾರಾಣಮಧಿಕೋ ವಿಶೇಷಃ ಜ್ಞಾನೇನ ಹೀನಾ ಪಶುಭಿಃ ಸಮಾನಾಃ ॥*

ಆಹಾರ, ನಿದ್ರೆ, ಭಯ, ಮೈಥುನ– ಈ ನಾಲ್ಕು ಪಶುಗಳಿಗೂ ಮನುಷ್ಯರಿಗೂ ಸಾಮಾನ್ಯವಾಗಿ ಇರುವಂತಹು ದಾದರೂ ಪಶುಗಳಿಗಿಂತಲೂ ಮನುಷ್ಯ ಮೇಲು ಎನ್ನುವುದಕ್ಕೆ ಮನುಷ್ಯ ನಿಗಿರುವ ವಿವೇಕಶಕ್ತಿಯೆಂಬ ಒಂದು ವಿಶೇಶ ಶಕ್ತಿ ಇರುವುದರಿಂದಲೇ ಆತ ಶ್ರೇಷ್ಠ ಅದಕ್ಕೆ ಕಾರಣ ಮನುಷ್ಯನ ಮನುಷ್ಯತ್ವ ಪ್ರಕಟವಾಗುವುದು ಅವನ ವಿವೇಚನಾ ಶಕ್ತಿಯಿಂದ ಎಂಬುದು ಸರ್ವವಿದಿತ.

ವಿವೇಕವೆಂದರೆ ಜ್ಞಾನ, ಸತ್ಯಸ್ಥಿಕೆ, ಒಳಿತುಕೆಡಕುಗಳನ್ನು ನಿರ್ಣಯಿಸುವ ಶಕ್ತಿ, ನ್ಯಾಯ, ಅನ್ಯಾಯಗಳ ತಿಳುವಳಿಕೆ, ತಾರತಮ್ಯವನ್ನು ಗುರುತಿಸುವ ಶಕ್ತಿ, ವಿಷಯದ ವಿವೇಚನೆ, ಸೂಕ್ಷ್ಮವಾಗಿ ಯಾವುದನ್ನಾದರೂ ಪರೀಕ್ಷಿಸುವುದು, ವಿಚಾರ ಮಾಡುವುದು ಈ ಎಲ್ಲ ಅರ್ಥವಿವೇಕವೆಂಬ ಶಬ್ದಕ್ಕಿದೆ. ಇದು ಬುದ್ಧಿಶಕ್ತಿಯ ಸತ್ವ. ಇಂತಹ ಈ ಬುದ್ಧಿಶಕ್ತಿ, ವಿವೇಕ ಇರುವವನು ವಿವೇಕಿ ಅಂದರೆ ಅವನು ನ್ಯಾಯಾಧೀಶ, ಸಂನ್ಯಾಸಿ, ತತ್ತ್ವಜ್ಞಾನಿ ಯಾವ ಕಾರ್ಯ ಮಾಡಬೇಕಾದರೂ ಆ ವಿಷಯದ ಮೊದಲು ಅದರಿಂದ ಆಗುವ ಗುಣ ಅವಗುಣಗಳ ವಿಮರ್ಶೆ ಮಾಡಬೇಕು. ಆ ಕಾರ್ಯ ಮಾಡು ವುದು ನ್ಯಾಯವೇ ಅಥವಾ ಅನ್ಯಾಯವೇ, ಒಳಿತೋ, ಕೆಡುಕೋ ಎಂಬ ವಿವೇಚನೆ ಮಾಡುವುದು ಯಾವಾಗಲೂ ಅತಿ ಅಗತ್ಯ. ಯಾವುದೇ ಕಾರ್ಯವಾಗಲಿ ವಿವೇಚಿಸದೆ ಒಂದಿಂಗೊಮ್ಮೆಲೆ ಮಾಡುವುದರಿಂದ ಆಪತ್ತಿನ ಮೇಲೆ ಆಪತ್ತು ಒದಗುವ ಶಕ್ಯತೆ ಇದೆ. ಆಪತ್ತು–ವಿಪತ್ತು ಯಾವುದೂ ಉಂಟಾಗದೆ ಸುಸೂತ್ರವಾಗಿ ಅದರ ಫಲ ಪಡೆಯಲು ಮತ್ತು ಅದರಿಂದ ಸುಖ–ಸಂತೋಷ ಅನುಭವಿಸಲು ಅವಕಾಶ ದೊರಕಬೇಕೆಂದಾದರೆ ವಿವೇಚನೆಯನ್ನು ಮಾಡುವುದು ಅತ್ಯವಶ್ಯಕವಾದುದು ಆಗಿರುತ್ತದೆ. ಹೀಗೆ ವಿವೇಚನೆ ಮಾಡುವ ಬುದ್ಧಿಯೇ ವಿವೇಕ. ಈ ವಿವೇಕವಿಲ್ಲದ ಪಾಂಡಿತ್ಯ ನಿಷ್ಪ್ರಯೋಜಕ.

*ಯಸ್ಯ ನಾಸ್ತಿ ವಿವೇಕಸ್ತು ಕೇವಲಂ ಯೋ ಬಹುಶ್ರುತ*
*ನ ಸಜಾನಾತಿ ಶಾಸ್ತ್ರಾರ್ಥಮ್ ದರ್ವೀ ಪಾಕರಸಾನ್ನಿತ॥*

ಯಾವನಿಗೆ ವಿವೇಕವಿಲ್ಲದೆ ಕೇವಲ ಪಾಂಡಿತ್ಯ ಇರುವುದೋ ಯಾವನಿಗೆ ಶಾಸ್ತ್ರಗಳ ಅರ್ಥ ಹೊಳೆದಿರುವು ದಿಲ್ಲವೋ ಅವನು ಪಕ್ವಾನ್ನಗಳಲ್ಲಿ ಇಟ್ಟ ಸವುಟಿನಂತೆ ಎಂದು ಹೇಳುತ್ತದೆ ಮಹಾಭಾರತ (ಸವುಟಿಗೆ ಪಕ್ವಾನ್ನಗಳ ರುಚಿ ಹೇಗೆ ತಿಳಿದೀತು)

ವಿವೇಕವೆಂಬುದು ಒಂದು ಅಮೂಲ್ಯ ರತ್ನದಂತೆ. ಅದು ಮನುಷ್ಯನಿಗೆ ಮಾನ್ಯತೆಯನ್ನು ತಂದೊದಗಿಸುತ್ತದೆ. ಇಂತಹ ಈ ವಿವೇಕ ಮಾನವನಿಗೆ ಇರಲೇಬೇಕು. ವಿವೇಕಶಕ್ತಿ ಇಲ್ಲ ವೆಂದಾದರೆ ಮಾನವನು ಮೂರ್ಖನೇ ಅವನು ಕಾಸಿಗೂ ತುಟ್ಟಿಯಾಗುತ್ತಾನೆ. ವಿವೇಕಶಕ್ತಿ ಎಂಬುದಿಲ್ಲದಿದ್ದರೆ ಮಾನವ ಬುದ್ಧಿಹೀನನೆನಿಸಿಕೊಳ್ಳುತ್ತಾನೆ, ಮೂರ್ಖನೆಂದೆನಿಸಿಕೊಳ್ಳು ತ್ತಾನೆ. ಮೂರ್ಖತ್ವವೆಂಬುದು 'ಕಷ್ಟಂ ಖಲು ಮೂರ್ಖತ್ವ' ಎಂಬ ಮಾತಿನಂತೆ ಮಾನವನಿಗೆ ಮೂರ್ಖತ್ವವು ಅತಿ ಕಷ್ಟವನ್ನು ಅವಮಾನವನ್ನು ತಂದೊಡ್ಡುವಂತಹದ್ದು.

ವಿವೇಕಶಕ್ತಿ ಇದ್ದವನು ಪಂಡಿತನೆಂದೆನಿಸಿಕೊಳ್ಳುತ್ತಾನೆ. ಅವನು ಸದಾ ಹೇಗಿರುತ್ತಾನೆ. ನೋಡಿ;

*ನ ಪ್ರಾಪ್ಯಮಭಿವಾಂಛತಿ ನಷ್ಟಂ ನೇಚ್ಛಂತಿ ಶೋಚಿತುಂ*
*ಆಪತ್ಸುಪಿ ನ ಮುಹ್ಯಂತಿ ಸತಾಂ ಪಂಡಿತಬುದ್ಧಯ ॥*

ತನಗೆ ಅಲಭ್ಯವಾದುದನ್ನು ಅಪೇಕ್ಷೆ ಪಡದೆ, ಕಳೆದು ಹೋದುದರ ಬಗ್ಗೆ ಚಿಂತೆ ಮಾಡದೆ ವಿಪತ್ಕಾಲದಲ್ಲಿ ಸಹ ಮೋಹಪರವಶನಾಗದೆ ಇರುವ ಅವರೆ ನಿಜವಾಗಿಯೂ ಪಾಂಡಿತ್ಯವುಳ್ಳವರಾಗಿದ್ದಾರೆ. ಅದೇ ಅಲಭ್ಯವಾದುದಾಗಿರು ವುದನ್ನು ಅಪೇಕ್ಷಿಸಿ, ಕಳೆದುಹೋದುದರ ಬಗ್ಗೆ ಹೋಯಿತಲ್ಲಾ

* 'ಶ್ರೀನಿವಾಸ', ಡಿ.ವಿ.ಎಸ್. ಹೈಸ್ಕೂಲಿನ ಹತ್ತಿರ, ವಿನೋಬ ನಗರ, ಶಿವಮೊಗ್ಗ–೫೭೭ ೨೦೪.





ಎಂದು ಚಿಂತೆ ಮಾಡಿ ದುಃಖಪಟ್ಟು, ವಿಪತ್ಕಾಲದಲ್ಲಿ ಮೋಹಪರವಶನಾಗಿ ದುಃಖಿಸುತ್ತಾರೆ ಮೂರ್ಖಜನರು.

ಬದುಕು ಯಾವಾಗಲೂ ಒಂದೇ ರೀತಿ ಇರುವುದಿಲ್ಲ. ಬಿಸಿಲು–ನೆರಳಿನಂತೆ ಸುಖ–ದುಃಖ ನಿರಂತರ ಪರ್ಯಾಯ ರೂಪದಲ್ಲಿ ಬರುತ್ತದೆ. ಇದು ಸ್ವಾಭಾವಿಕವೆಂದು ವಿವೇಕಿಗಳು ತಿಳಿಯುತ್ತಾರೆ. ಅದೇ ವಿವೇಕಶಕ್ತಿ ಇಲ್ಲದ ಮೂರ್ಖರು ಹಗಲೂ–ರಾತ್ರಿಯೂ ಹೀಗಾಯಿತಲ್ಲಾ ಎಂದು ರೋಧಿಸುತ್ತಾರೆ.

*ಶೋಕ ಸ್ಥಾನ ಸಹಸ್ರಾರು ಭಯ ಸ್ಥಾನ ಶತಾನೀಚ*
*ದಿವಸೇ ದಿವಸೇ ಮೂಢಂ ಆವಿಶರತಿ ನ ಪಂಡಿತಾ*

ದುಃಖಪ್ರಸಂಗಗಳು ಸಾವಿರಾರು, ಭಯಾನಕ ಸಂದರ್ಭ ನೂರಾರು. ಪ್ರತಿದಿನವೂ ಇವು ತಲೆಯ ಮೇಲೆ ಮುತ್ತಿಗೆ ಹಾಕುತ್ತವೆ. ಆದರೆ ಅವೆಲ್ಲವನ್ನು ವಿವೇಕಿ, ಪಂಡಿತರಿಗೆ ಮುಟ್ಟುವುದಿಲ್ಲ. ಮೂರ್ಖರಿಗೆ ಮಾತ್ರ ಮುತ್ತಿಗೆ ಹಾಕಿ ಇರುತ್ತವೆ ಎಂದು ಹೇಳುತ್ತದೆ ಮಹಾಭಾರತ.

ವಿವೇಕ ಇಲ್ಲದವರ ಅಂದರೆ ಮೂರ್ಖರ ಬಾಳು ಹೇಗಿರುತ್ತದೆ. ಇದರ ಬಗ್ಗೆ ಗರುಡಪುರಾಣದಲ್ಲಿ ಒಂದು ಶ್ಲೋಕ ಹೀಗಿದೆ :

*ಪ್ರಭಾತೇ ಮಲಮೂತ್ರಾಭ್ಯಾಂ ಕ್ಷುತ್‌ತೃಡ್‌ವಾಧ್ಯಣೇ ರತೇ*
*ರಾತ್ರಾಮದನ ನಿದ್ರಾಭ್ಯಾಂ ಬಾಧ್ಯಂತೇ ಮೂಢ ಮನಸಾ॥*

ಮುಂಜಾನೆ ಮಲ–ಮೂತ್ರಗಳಿಂದ, ಮಧ್ಯಾಹ್ನ ಹಸಿವು ಬಾಯಾರಿಕೆಯಿಂದ ರಾತ್ರಿ ಕಾಮ ಮತ್ತು ನಿದ್ದೆಯಿಂದ ಮೂಢರು ಮನುಷ್ಯರು ಬಾಧೆಯನ್ನನುಭವಿಸುತ್ತಾರೆ.

ಕರೆದ ಹೊರತು ಎಲ್ಲಿಯೂ ಹೋಗದೆ ವಿಚಾರಿಸದ (ಕೇಳಿದ) ಹೊರತು ಮಾತನಾಡದೆ, ಯಾರ ಮೇಲೂ ದ್ವೇಷ ಸಾಧಿಸದೆ ಶಾಂತಚಿತ್ತದಿಂದ ಇರುವುದೇ ವಿವೇಕಗಳ ಈ ಗುಣ ಆದರಣೀಯವಾಗಿರುತ್ತದೆ. ಅದೇ ವಿವೇಕಶೀಲ ರಲ್ಲದ ಮೂರ್ಖರು ಹೀಗಿರುತ್ತಾರೆ–

*ಅನಾಹೂತ ಪ್ರೇವೇಶಂತಿ ಅಪೃಷ್ಟೋ ಬಹುಭಾಷಿತೇ*
*ಬಲವತಾಂಚಯೋ ದ್ವೇಷ್ಟಿ ತಮಾಹುರ್ಮೂರ್ಖಚೇತಸಮ್।*

ಆಮಂತ್ರಣವಿಲ್ಲದಿದ್ದರೂ ಅಲ್ಲಿ ಪ್ರವೇಶ ಮಾಡುತ್ತಾರೆ. ಕೇಳದೆ, ವಿಚಾರಿಸದೆ ಇದ್ದರು ಮಾತಿನ ಮಳೆ ಸುರಿಸುತ್ತಾರೆ. ತಮಗಿಂತ ಬಲಿಷ್ಟರಾದವರ ಮೇಲೆ ದ್ವೇಷ ಪಡುತ್ತಾರೆ ಎಂದು ಮೂರ್ಖರ ಲಕ್ಷಣ ಹೇಳುತ್ತದೆ ಈ ಸೂಕ್ತಿ. ಅಂದರೆ ಎಲ್ಲಿ ಹೋಗಬಹುದು, ಎಲ್ಲಿ ಹೋಗಬಾರದು, ಎಲ್ಲಿ ಮಾತ ನಾಡಬೇಕು, ಎಷ್ಟು ಮಾತನಾಡಬೇಕು, ಹೇಗೆ ಮಾತನಾಡ ಬೇಕು ಎಂಬ ಪರಿಜ್ಞಾನ ಅವರಿಗಿರುವುದಿಲ್ಲ.

ಹೀಗಿರುವವರ ಒಡನಾಟ, ಗೆಳೆತನ ಸಾಧುವಾದದ್ದಲ್ಲ ಎಂಬುದು ಶಾರ್ಙಧರ ಪದ್ಧತಿಯು ಹೀಗೆ ಹೇಳುತ್ತದೆ :

*ಹರೇಃ ಪಾದಾಹತಿ ಶ್ಲಾಘ್ಯೊ ನ ಶ್ಲಾಘ್ಯಂ ಖರರೋಹಣಂ*
*ಸ್ಪರ್ಧಾಪಿ ವಿದುಷಾ ಯುಕ್ತೌ ನ ಯುಕ್ತಾ ಮೂರ್ಖಮಿತ್ರತಾ॥*

ಕುದುರೆಯಿಂದ ಒದೆಸಿಕೊಂಡರೂ ಯೋಗ್ಯ. ಆದರೆ ಕತ್ತೆಯನ್ನು ಏರುವುದು ತರವಲ್ಲ. ವಿದ್ವಜ್ಜನರೊಡನೆ ವಾದ ಮಾಡಬಹುದು ಆದರೆ ಮೂರ್ಖರೊಡನೆ ಗೆಳೆತನ ಯುಕ್ತವಲ್ಲ.

ಇನ್ನು ಅವರಿಗೇನಾದರೂ ತಿಳುವಳಿಕೆಯನ್ನು ಕೊಡಲು ಹೋದರೆ; ಅದೂ ಪ್ರಯೋಜನವಿಲ್ಲ, ಏಕೆಂದರೆ '**ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ಶಾಂತಯೇ**' ಮೂರ್ಖರಿಗೆ ಮಾಡುವ ಉಪದೇಶದಿಂದ ಅವರ ಕೋಪ ಹೆಚ್ಚುತ್ತದೆಯೆ ಹೊರತು ಶಾಂತವಾಗುವುದಿಲ್ಲ.

*ಅಹೋಬಲ ಭುಜಂಗಸ್ಯ ವಿಚಿತ್ರೋಯಂ ವಧಿಕ್ರಮಃ*
*ಅನ್ಯಸ್ಯ ದಶತಿ ಶ್ರೋತ್ರಮನ್ಯಃ ಪ್ರಾಣೈರ್ವಿಯುಜ್ಯತೇ॥*

(ಪಂಚತಂತ್ರ)

ಮೂರ್ಖನೆಂಬ ಸರ್ಪವು ಕೊಲ್ಲುವ ರೀತಿಯ ವಿಲಕ್ಷಣ ವಾಗಿರುತ್ತದೆ. ಈ ಮೂರ್ಖಸರ್ಪವು ಒಬ್ಬನ ಕಿವಿ ಕಚ್ಚಿದರೆ ಇನ್ನೊಬ್ಬರ ಮರಣ ಸಂಭವಿಸುವುದು. ಹೀಗಾಗಿ ಚಾಣಕ್ಯ ನೀತಿ ಹೀಗೆ ಹೇಳುತ್ತದೆ :

*ಮೂರ್ಖಶ್ಚಿರಾಯು ರ್ಜಾಯ ತೋಽಪಿ ತಸ್ಮಾತ್ ಜಾತ ಮೃತೋದರಃ*
*ಮೃತ ಚಾಲ್ಪದುಃಖಾಯ ಯಾವಜ್ಜೀವಂ ಜಡೋ ದಹೇತ್ ॥*

ಚಿರಾಯುವಾಗಿರುವ ಮೂರ್ಖಮಗನಿಗಿಂತ ಹುಟ್ಟಿದ ಕೂಡಲೇ ಸತ್ತವನು ನಿಜವಾಗಿಯೂ ಮೇಲು ಸತ್ತವನಿಂದ ಉಂಟಾಗುವ ದುಃಖವು ಅಲ್ಪಪ್ರಮಾಣದ್ದು, ಮೂರ್ಖ ನಾದರೋ ಬದುಕಿರುವವರಿಗೂ ಸುಡುತ್ತಿರುತ್ತಾನೆ. ಮೂರ್ಖ ಮಕ್ಕಳ ತಂದೆ–ತಾಯಿಗಳ ಮನೋವ್ಯಥೆಯನ್ನು ಬಿಂಬಿಸುತ್ತದೆ ಈ ಶ್ಲೋಕ. ಆದ್ದರಿಂದ ಮೂರ್ಖತ್ವ ಮೆಟ್ಟಿ ನಿಲ್ಲುವ ವಿವೇಕವು

ಪ್ರತಿಯೊಬ್ಬರಲ್ಲಿ ಇರಬೇಕಾದುದು ಅತ್ಯವಶ್ಯಕವಾದುದು.

ವಿವೇಕವೆಂಬುದು ಬುದ್ಧಿಜನ್ಯವಾಗಿದೆ. ಹಲವು ಬಾರಿ ನಮ್ಮ ಮನೋಗಮ್ಯವಾಗಿರುವ ಈ ವಿವೇಕವು ನಾನಾ ಕಾರಣಗಳಿಂದ ಶಿಥಿಲವಾಗುವುದುಂಟು ಇದಕ್ಕೆ ವಿಧಿ ಕಾರಣವೆನ್ನುವವರೂ ಇದ್ದಾರೆ. ಕೇಡುಕಾಲ ಬಂದಾಗ ಬುದ್ಧಿಯು ಮೊದಲೇ ಕೆಡುತ್ತದೆ ಎಂದಿದ್ದಾರೆ ಹಿರಿಯರು. ಎಷ್ಟೋ ಸಲ ಜ್ಞಾನಿಯೆಂದೆನಿಸಿಕೊಂಡರೂ ವಿವೇಕಶೂನ್ಯರಾಗುವುದುಂಟು

*ಅಸಂಭವಂ ಹೇಮಮೃಗಸ್ಯ ಜನ್ಮಂ ತಥಾಪಿರಾಮೋ*
*ಲುಲುಭೇ ಮೃಗಾಯ ಪ್ರಾಯಿಃ ಸಮಾಪನ್ನ ವಿಪತ್ತಿ ಕಾಲೇ*
*ಧೀಯಾಪಿ ಪುಂಸಾ ಮಲಿನೀಭವತಿ ॥*

ಚಿನ್ನದ ಜಿಂಕೆ ದೊರಕುವುದು ಅಥವಾ ಇರುವುದು ಅಸಂಭವವೆಂದು ಇದ್ದರೂ ಶ್ರೀರಾಮಚಂದ್ರನು ಚಿನ್ನದ ಜಿಂಕೆಗಾಗಿ ಕಷ್ಟಪಡಲು ಹೋಗಿ ಸೀತಾಪರಣವಾಯಿತು ಎಂದಿರುವಾಗ; ವಿಪತ್ತು ಬಂದ ವೇಳೆಯಲ್ಲಿ ವಿವೇಕಿಯ ಬುದ್ಧಿ ನಿಸ್ತೇಜವಾಗುತ್ತದೆ. ಮಹಾಭಾರತದಲ್ಲಿ ಪ್ರಾಜ್ಞನಾದ ಧರ್ಮರಾಯನು ಗೊತ್ತಿದ್ದರೂ ಸಹ ಪಗಡೆಯಾಟದಲ್ಲಿ ಕಷ್ಟ ಅನುಭವಿಸಿದನು. 'ಬುದ್ಧಿನಾಶಾತ್ ಪ್ರಣಶ್ಯತೀ' ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದಂತೆ ಬುದ್ಧಿಭ್ರಮಣೆಯಿಂದ ಸರ್ವನಾಶವಾಗುತ್ತಾರೆ.

ಅದೇ ಹಲವು ಬಾರಿ 'ಆಗುವುದೆಲ್ಲ ಒಳ್ಳೆಯದಕ್ಕೆ' ಎಂಬ ನುಡಿಯಂತೆ ವಿವೇಕಶೂನ್ಯನಾಗಿ ನಡೆದ ವೇಳೆಯಲ್ಲಿ ಬರುವ ಆಪತ್ತೋ-ವಿಪತ್ತೋ ಮುಂದಿನ ಒಳಿತಿಗೆ ಕಾರಣವಾಗುವೂ ಉಂಟು. ಈ ಎಲ್ಲ ಘಟನೆಗಳಿಂದ ಅವರ ಜೀವನದಲ್ಲಿ ಒಂದು ಹೊಸ ತಿರುವು ಬಂದೊದಗುವುದೂ ಉಂಟು ಎಂಬುದೂ ಅಷ್ಟೇ ನಿಜ. ಹೇಗೆಂದರೆ ಸೀತಾಪಹರಣದಿಂದ ದುಷ್ಟ ರಾವಣನ ವಧೆಯಾಯಿತು. ಪಾಂಡವರಿಗೆ ವನವಾಸದಿಂದ ಧರ್ಮಕ್ಕೆ ಜಯ ಲಭಿಸಿತು. ಅಂದಮೇಲೆ ಮಾನವನು ಕಷ್ಟಬಂದಾಗ ಕುಗ್ಗದೆ ಅದನ್ನ ಎದುರಿಸಿ ಸಾಗಬೇಕು. ಆಗ ಅವರಿಗೆ ಬದುಕಿನಲ್ಲಿ ಸಫಲತೆ ದೊರಕುವ ವಿಷಯದಲ್ಲಿ, ಯಾವುದಾದರೂ ಸಾಧನೆ ಮಾಡುವ ವಿಷಯದಲ್ಲಿ ಯಶಸ್ಸು ದೊರಕುವುದಿಲ್ಲ ಯಾವುದೇ ರೀತಿಯ ಸಂಶಯವಿಲ್ಲ. ವಿಪತ್ತಿನ ಕೊನೆಯಲ್ಲಿ ಶುಭ ಫಲವೇ ಇರುವುದರಿಂದ ಭೀತಿ ಪಡೆದೆ ನೀತಿಗೆಡದೆ ಮುಂದೆ ಹೋಗುವುದು ವಿವೇಕ ಗುಣವಾಗಿದೆ. ಆದರೂ ಮೊದಲೇ ವಿವೇಚನೆಯಿಂದ ಕಾರ್ಯ ಮಾಡುವುದು ಒಳಿತು. ವಿಪತ್ತಿನ ನಂತರ ಸುಖ ಪ್ರಾಪ್ತಿಯಾಗುತ್ತದೆಯೆಂದು ವಿವೇಕಹೀನರಾಗಿ ಕಾರ್ಯ ಮಾಡುವುದು ಶುಭಕಾರಕ ವಿಷಯವಲ್ಲ. ನೆನಪಿನಲ್ಲಿರಲಿ-

*ಸಹಸಾ ವಿದಧೀತ್ ನಕ್ರಿಯಾಂ ಅವಿವೇಕಃ ಪರಮಪದಾ*
*ಮೃಣತೇ ವಿಮೃಶ್ಯ ಕಾರಣಂ ಗುಣಲಬ್ಧಾ ಸ್ವಯಮೇವ ಸಂಪದಃ ।*

ವಿಚಾರ ಮಾಡದೆ, ವಿವೇಚಿಸದೆ ಏಕಾಏಕಿ ದುಡುಕಿ ಯಾವುದೇ ಕಾರ್ಯ ಮಾಡಬಾರದು. ಅದು ಅವಿವೇಕ ಮತ್ತು ಆಪತ್ತಿನ ದಾರಿ. ವಿವೇಕದಿಂದ ಚಿಂತಿಸಿ ಕಾರ್ಯ ಮಾಡುವ ಗುಣಕ್ಕೆ, ಸೋಲಿನಲ್ಲೂ ಸಫಲತೆ ತನ್ನ ತಾನೇ ದೊರಕುತ್ತದೆ.

ಇವತ್ತು ಜನ ಧರ್ಮವನ್ನು ಮರೆಯುತ್ತಿದ್ದಾರೆ. ಅವರು ಧರ್ಮಪರಿಪಾಲನೆ ಮಾಡುತ್ತಾ ಇಲ್ಲ. ಅಧರ್ಮ ಜಾಸ್ತಿಯಾಗಿ ಸಮಾಜದಲ್ಲಿ ಅಶಾಂತಿ, ಗೊಂದಲ, ಅಸಮಾಧಾನ ಹೆಚ್ಚಾಗುತ್ತಿದೆ. ಮಾನವ ಧರ್ಮದ ದಿವ್ಯಸಂದೇಶ ಏನೆಂದರೆ ಪರಸ್ಪರ ಪ್ರೀತಿ, ವಿಶ್ವಾಸ, ಪ್ರೇಮ. ಪ್ರೇಮಮಯವಾಗಿರುವಂತಹ ಜೀವನ. ಬಸವಣ್ಣನವರು "ಇವನಾರವ ಇವನಾರವ ಎಂದೆನಿಸದಿರಯ್ಯ, ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯ" ಎಂದು ಹೇಳಿದ್ದಾರೆ. ಎಷ್ಟು ಒಳ್ಳೆಯ ಮಾತು, ಇಷ್ಟೇ ಸಾರಸರ್ವಸ್ವ. ಆದುದರಿಂದ ಧರ್ಮ ಎನ್ನುವುದು ಜಗತ್ತನ್ನು ಶಾಂತಿ ಸಾಮ್ರಾಜ್ಯವಾಗಿ : ಸುಖಮಯವಾಗಿ, ಸಮೃದ್ಧಿಯನ್ನಾಗಿ ಮಾಡಬಲ್ಲುದು. ಧರ್ಮವೆಂದರೆ ಸುಖಶಾಂತಿ, ಸಮೃದ್ಧಿ ಕೊಡತಕ್ಕ ಒಂದು ಮಹಾಸಂದೇಶ.

– ಶ್ರೀವಾಣಿ





# ಸಚ್ಚಾರಿತ್ರಕ್ಕೆ ಶಿಕ್ಷಣ ಮೂಲಾಧಾರ ಮತ್ತು ಮೌಲ್ಯಗಳು

– ರಾಜಶೇಖರ ಜಮದಂಡಿ *

**ಮಾ**ನವನ ಬದುಕು ವಿಶಾಲ, ವಿವೇಕ, ವಿಹಂಗಮ, ವೈಶಿಷ್ಟ್ಯ, ಸಚ್ಚಾರಿತ್ರ್ಯ, ಸುಜ್ಞಾನ ಮುಂತಾದ ಆಲೋಚನೆಗಳ ಅವಿನಾಭಾವ ಸಂಬಂಧದೊಳಗೆ ಶಿಕ್ಷಣದ ಪಾತ್ರ ತುಂಬಾ ಮಹತ್ವದ್ದಾಗಿದೆ. ಶಿಕ್ಷಣ ಕಲಿಸುವ ಶಿಕ್ಷಕರ ಪಾತ್ರವೂ ಸಹ ಅಷ್ಟೇ ಮುಖ್ಯ. ಪ್ರಜ್ಞಾಪೂರ್ವ ನಡವಳಿಕೆಗಳನ್ನು ವ್ಯಕ್ತಿಯಲ್ಲಿ ಹೊರಹೊಮ್ಮುವಂತೆ ಸ್ಫೂರ್ತಿ ನೀಡುವ ಏಕ ಮಾತ್ರ ಶಕ್ತಿ ಶಿಕ್ಷಣ ಮತ್ತು ಶಿಕ್ಷಕರಿಗೆ ಮಾತ್ರವುಂಟು. ನಮ್ಮ ದೇಶದ ಸ್ವಾತಂತ್ರ್ಯ ಸಮಾನತೆ, ಸಂಸ್ಕೃತಿ ಅಳಿಯದಂತೆ ಎಚ್ಚರಿಕೆ ವಹಿಸುವ ಕಾರ್ಯ ಇನ್ನೂ ಅಧಿಕವಾಗಬೇಕು. ಅಲ್ಲದೇ ಮಾನವೀಯ ಮೌಲ್ಯಗಳು ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚೆಚ್ಚು ಪ್ರಸಾರಗೊಂಡರೆ ಸಮಾಜವನ್ನು ಸುಸ್ಥಿತಿಯಲ್ಲಿಡ ಬಹುದು. ಜಗದೊಳಗೆ ಸಂತಸ, ಸಡಗರ, ಗೆಲುವುಗಳನ್ನು ಉದ್ದೀಪನಗೊಳಿಸಬಹುದು. ಮನುಷ್ಯನ ಮನಸ್ಸು, ಶೀಲ ಸಂಸ್ಕೃತಿ ಮತ್ತು ಸಾಧನೆಯ ಬೆಳವಣಿಗೆಗೆ ಮುಖ್ಯವಾಗಿ ಶಿಕ್ಷಣ ಅತ್ಯವಶ್ಯಕ. ಜೀವನದಲ್ಲಿ ಮಾನವೀಯ ಮೌಲ್ಯಗಳಿಗೆ ಹಾಗೂ ಏಕಾಗ್ರತೆಯ ಚಿಂತನೆಗೂ ಶಿಕ್ಷಣ ಅತ್ಯಗತ್ಯ. ಶಿಕ್ಷಣ ವೆಂದರೆ ಬರೀ ಜ್ಞಾನ ಸಂಪಾದನೆಯಲ್ಲ, ಜೀವನವೂ ಸ್ವಯಂ ಪರಿಪೂರ್ಣತೆ ಆಗುವುದರಲ್ಲಿ ಅದು ಸಹಕಾರಿ ಯಾಗಬೇಕು. ಅದು ದೇಹ, ಬುದ್ಧಿ, ರೀತಿ, ನೀತಿಗಳಲ್ಲದರ ಬೆಳವಣಿಗೆಗೂ ಹೊಂದಿಕೆಯಾಗಿರಬೇಕು. ಮನುಷ್ಯನಿಗೆ ಮನುಷ್ಯತ್ವ ಪ್ರಾಪ್ತವಾಗಬೇಕಾದರೆ ಶಿಕ್ಷಣದ ಪಾತ್ರ ಬಹಳ ದೊಡ್ಡದು. ಹೀಗೆ ಶಿಕ್ಷಣ ಸಕಾಲದಲ್ಲಿ ಮನುಷ್ಯನಿಗೆ ದೊರೆಯದಿದ್ದರೆ ಕಾಲಕಾಲದ ಸುಖಶಾಂತಿಗಳನ್ನು ಅನುಭವಿಸಲು ಆಗುವುದಿಲ್ಲ. ಶಿಕ್ಷಣದ ಮೌಲ್ಯಗಳು ಪ್ರತಿ ಯೊಬ್ಬ ಮನುಷ್ಯನಿಗೆ ಆತ್ಮತೃಪ್ತಿ ಮತ್ತು ಆತ್ಮಶೋಧನೆಗೆ ಕ್ರಿಯಾತ್ಮಕವಾಗಿರುತ್ತವೆ. ಪ್ರತಿ ಮನುಷ್ಯನ ನಾಗರಿಕತೆಯ ವ್ಯಕ್ತಿತ್ವ ಅರಳುವುದಕ್ಕೆ ಸಮುದಾಯದ ಬದುಕು, ಸ್ನೇಹ, ಸಹಕಾರಗಳು ಮನದಲ್ಲಿ ಬೆಳೆಯುವುದಕ್ಕೆ ಮೌಲ್ಯಾಧಾರಿತ ಶಿಕ್ಷಣ ಅತ್ಯವಶ್ಯಕ.

ಹತ್ತು ಬೃಹತ್ ಸಂಪುಟಗಳಲ್ಲಿ ಮಾನವನ ನಾಗರಿಕತೆಯ ಇತಿಹಾಸವನ್ನು ಬರೆದ ಎಲ್.ಡಿ.ರಂಟ ಅವರು 'Education is the transmission of civilization' ಎಂದು ಹೇಳಿದ ಸೊಗಸಾದ ಮಾತು ಶಿಕ್ಷಣದ ಸ್ವರೂಪವನ್ನು ಕುರಿತದ್ದಾಗಿದೆ. ಶಿಕ್ಷಣವು ಪ್ರತಿ ವ್ಯಕ್ತಿಯ ಮೇಲೂ ಮೂರು ರೀತಿಯ ಆಯಾಮಗಳನ್ನು ರೂಪಿಸಬಲ್ಲದು. ಅಂದರೆ ತಿಳಿಯುವುದು (Knowing) ಅನುಭವಿಸುವುದು ಮತ್ತು ಮಾಡುವುದು. ಈ ರೀತಿಯ ಮೌಲ್ಯಾಧಾರಿತ ಶಿಕ್ಷಣವು ಮಾತ್ರ ಮಕ್ಕಳ ಹೃದಯಗಳನ್ನು ಸ್ಪಂದಿಸಬಲ್ಲದು. ವ್ಯಕ್ತಿತ್ವದಲ್ಲಿ ಸಮತೋಲನ ತರುವ ಮೂಲಕ ಸಂವಿಧಾನ ನಿರೂಪಿತ ಸರ್ವ ಸಮಾನತೆಯ ಸಮಭಾವವನ್ನುಂಟು ಮಾಡುವ ಮೌಲ್ಯಯುತ ಶಿಕ್ಷಣದ ಅನನ್ಯತೆಯು ಇನ್ನಷ್ಟು ತೀವ್ರವಾಗಬೇಕಿದೆ.

ಶಿಕ್ಷಣದಲ್ಲಿ ನಾಲ್ಕು ರೀತಿಯ ಮೌಲ್ಯಗಳನ್ನು ಗುರುತಿಸಬಹುದು. ೧. ಅಕ್ಷರ ಜ್ಞಾನ ೨. ಅರಿವು ೩.ಕ್ರಿಯಾಶೀಲತೆ ೪. ಪರಿಣಾಮ. ಅಕ್ಷರ ಜ್ಞಾನದಿಂದ ಸರಳ ಸಾಹಿತ್ಯ ಓದುವುದು ಮತ್ತು ಬರೆಯುವುದರ ಸಾಮರ್ಥ್ಯ ಬೆಳೆಯುತ್ತದೆ. ಅದೇ ಅಕ್ಷರ ಜ್ಞಾನದಿಂದ ಸುತ್ತ ಮುತ್ತಲಿನ ಪರಿಸರದ ಅರಿವು ನಮಗಾಗುತ್ತದೆ. ಅಂಥ ಅರಿವು ಬಲಿತಂತೆ ವಾಸ್ತವಿಕ ಸ್ಥಿತಿ-ಗತಿಗಳ ಆಗು-ಹೋಗು ಗಳ ಅಭಿವೃದ್ಧಿಯ ಕುರಿತಂತೆ ಕ್ರಿಯಾಶೀಲತೆ ಕಾರ್ಯ ರೂಪಕ್ಕೆ ಬರುತ್ತದೆ. ನಂತರ ಈ ವರ್ಷದಿಂದ ಉತ್ತಮ ಪ್ರತಿಕ್ರಿಯೆಯ ಮೂಲಕ ಪರಿಣಾಮಕಾರಿಯಾದ ಆದ್ಯತೆ ಒದಗಿಬರುತ್ತದೆ.

ಶಿಕ್ಷಣವೆಂಬುದು ಸಮಾಜದಲ್ಲಿ ಬದಲಾವಣೆಗಳನ್ನು, ಸಾಮಾಜಿಕ ಸಂಬಂಧಗಳನ್ನು ಗಟ್ಟಿಗೊಳಿಸುವಲ್ಲಿ ಪ್ರಮುಖ ಸಾಧನವಾಗಿದೆ. ಇದು ಸ್ವಾಭಿಮಾನದ, ಸ್ವಾವಲಂಬನೆಯ ಸಂಕೇತವಷ್ಟೇ ಅಲ್ಲ ದೇಶದ ಆರ್ಥಿಕಾಭಿವೃದ್ಧಿಗೆ ಪೂರಕವಾಗಿದೆ. ಮುಖ್ಯವಾಗಿ ಶಿಕ್ಷಣವೆಂದರೆ ಜ್ಞಾನ. ಈ ಜ್ಞಾನವನ್ನು ಓದು-ಬರಹದಿಂದ ಪಡೆದುಕೊಳ್ಳುತ್ತೇವೆ. ಓದುವುದೇನು ಮಹಾ? ಎಂದು ಕೆಲವರು ಉದ್ಗಾರ ತೆಗೆಯಬಹುದು. ಶಾಲಾ-ಕಾಲೇಜುಗಳಲ್ಲಿ ಕೇವಲ ಪರೀಕ್ಷೆಗಾಗಿ ಓದುವುದು,

* ಸಾಹಿತಿ-ಚಿಂತಕ, 'ಬಸವ ಸದನ', ಚಾಮರಾಜನಗರ-೫೭೧ ೩೧೩.

ರ್‍ಯಾಂಕ್ ಬರುವುದು, ಉದ್ಯೋಗ ಪಡೆಯುವುದು, ಐಷಾರಾಮ ಜೀವನ ನಡೆಸುವುದು, ಓದಿಗಾಗಿಯೇ ಓದುವುದು- ಇವೆಲ್ಲಾ ಓದಿನ ಸುಖದ ಅನುಭವವಲ್ಲ. ನಿಜವಾದ ಓದಿನಲ್ಲಿ ಸುಖವಿದೆ ಸುಖದ ಹಿಂದೆ ಜ್ಞಾನದ ವಿಸ್ತಾರವಿದೆ, ಜ್ಞಾನದ ಹಿಂದೆ ಅನುಭವವಿದೆ. ಅನುಭವದ ಹಿಂದೆ ಆತ್ಮಸ್ಥೈರ್ಯ, ಆತ್ಮಸ್ಥೈರ್ಯದಿಂದ ಶುದ್ಧ ವ್ಯಕ್ತಿತ್ವದ ನಿರ್ಮಾಣವಿದೆ. ಹಾಗಾಗಿ ಭೌತಿಕವಾದ ಎಷ್ಟೋ ಸುಖ-ಸಾಧನೆಗಳನ್ನು ಪಡೆಯುವುದಕ್ಕಿಂತ ಓದಿನ ಸುಖವೆಂಬುದು ಅಂತರಂಗದಲ್ಲಿ ನಿತ್ಯನೂತನವೂ ನಿತ್ಯಸತ್ಯವೂ ಹೌದು. ಜೀವನದಲ್ಲಿ ಮೌಲ್ಯಯುತವಾಗಿ ನಾವು ಹೇಗೆ ಬದುಕಬೇಕೆಂಬ ದೃಷ್ಟಿಕೋನವನ್ನು ವಿಸ್ತರಿಸುವುದು ಸಹ ಶಿಕ್ಷಣದ ಉದ್ದೇಶ ವಾಗಿದೆ. ಶಿಕ್ಷಣವೆಂದರೆ ಸಂಶಯಕ್ಕೆ ಅವಕಾಶವಿಲ್ಲದಂತಹ ಅವರವರ ಭಾಷೆಯಲ್ಲಿ ರಚನೆಗೊಂಡು ಕಲಿಕೆಗೆ ಮುಕ್ತ ವಾತಾವರಣ ಕಲ್ಪಿಸಿರಬೇಕು. ನಮ್ಮ ದೇಶ ಸ್ವತಂತ್ರ್ಯಗೊಂಡು ಹಲವಾರು ವರ್ಷಗಳು ಕಳೆದರೂ ಶಿಕ್ಷಣದ ಮಾಧ್ಯಮ ಯಾವುದಾಗಿರಬೇಕೆಂಬ ಗೊಂದಲದ ಪ್ರಶ್ನೆಗೆ ಇನ್ನೂ ನಮಗೆ ಸರಿಯಾದ ಉತ್ತರ ಗೊತ್ತಾಗಿಲ್ಲ. ಜೀವನದಲ್ಲಿ ನಾವು ಅನೇಕ ಭಾಷೆಗಳನ್ನು ಕಲಿಯಬಹುದಾದರೂ ಮಾತೃ ಭಾಷೆಗೆ ಮಹತ್ವದ ಸ್ಥಾನ-ಮಾನ ಕೊಡಲೇಬೇಕಾಗುತ್ತದೆ. 'ಅದು ಸುಲಿದ ಬಾಳೆಯ ಹಣ್ಣಿನಂತೆ ರುಚಿಕರ, ಉಷ್ಣ ಇಳಿದ ಹಾಲಿನಂತೆ ಹಿತಕರ' ವಾಗಿರುವುದರಿಂದ ಹೃದಯದ ಭಾವನೆಗಳನ್ನು ನಿರ್ಭೀತವಾಗಿ ಹಂಚಿಕೊಳ್ಳಲು ಸಾಧ್ಯ.

ನಮ್ಮ ಮಕ್ಕಳು ಸುಖವಾಗಿರಬೇಕು, ಭವಿಷ್ಯ ಉಜ್ವಲವಾಗಿರಬೇಕು ಎಂಬ ಆಸೆಗಳನ್ನು ಇಟ್ಟುಕೊಂಡ ತಂದೆ-ತಾಯಿಗಳ ಆಲೋಚನೆ ಎಂಥದ್ದೆಂದರೆ, ಕೇವಲ ಭೋಗ ಭಾಗ್ಯ ಹಾಗೂ ಸಾಕಷ್ಟು ಸಂಬಳ-ಗಿಂಬಳ ತರುವ ಅಧಿಕಾರಿಯಾಗಬೇಕೆಂಬುದೇ ಆಗಿರುತ್ತದೆ. ಇಂದಿನ ಶಿಕ್ಷಣದ ಗುರಿಯೂ ಅದೇ ಆಗಿರುವುದು ವಿಪರ್ಯಾಸ. ಶಿಕ್ಷಣವು ಇಂದು ಸಮಾಜದ ಯಾವ ಮನಸ್ಸುಗಳನ್ನು ಜೀವನದ ಸಫಲತೆಯ ಕಡೆಗೆ ಸೆಳೆಯುವಲ್ಲಿ ವಿಫಲವಾಗಿದೆ. ಇದರಿಂದ ನಾನಾ ಕಡೆಗಳಲ್ಲಿ ಯುವಕರಿಗೆ ಸಾಮಾಜಿಕ ಜವಾಬ್ದಾರಿ ಇಲ್ಲದೆ ಅವರು ಹಿಡಿದಿರುವ ಹಾದಿ ಅಣ್ವಸ್ತ್ರ ಸ್ಫೋಟ ಕ್ಕಿಂತಲೂ ಅಪಾಯಕಾರಿಯಾಗಿದೆ. ಇದರಿಂದ ಸಾಮಾಜಿಕ ಮೌಲ್ಯಗಳು ಕುಸಿದಿವೆ. ಭೌತಿಕ ಸಂಪತ್ತನ್ನು ಗಳಿಸ ಬೇಕೆಂಬುದೇ ಅವರ ಹಂಬಲ. ದಿನೇ ದಿನೇ ಪ್ರಬಲ ವಾಗುತ್ತಿದೆ. ಯುವಕರ ಗುಟುಕಾ, ಆಲ್ಕೋಹಾಲ್ ಅಂತಹ ಭ್ರಾಮಕ ಸುಖಮಯ ವಸ್ತುಗಳಿಗೆ ಬಲಿಯಾಗಿರುವುದು ಮತ್ತು ಸಣ್ಣ ಸಮಸ್ಯೆಗಳಿಗೆ ಆತ್ಮಹತ್ಯೆ ಪ್ರಯತ್ನಕ್ಕೆ ಒಡ್ಡಿಕೊಳ್ಳು ತ್ತಿರುವುದು ನೋಡಿದಾಗ ಶಿಕ್ಷಣದ ಗುಣಮಟ್ಟದ ಬಗ್ಗೆ ಸೋಜಿಗವಾಗುತ್ತದೆ. ಇವುಗಳ ನಿವಾರಣೆಗೆ ನಮ್ಮ ಶಿಕ್ಷಣವೂ ಇನ್ನೂ ಗಟ್ಟಿಯಾದ ಹೆಜ್ಜೆಗಳನ್ನು ಇಡಬೇಕಾಗಿದೆ. ಮಾನವನಲ್ಲಿ ಹಿಂಸಾಪ್ರವೃತ್ತಿಯನ್ನು ಶಮನಗೊಳಿಸಲು ಶಕ್ತಿ ಶಿಕ್ಷಣದಲ್ಲಿದೆ. ಜಗತ್ತಿನ ತುಂಬಾ ಹರಡಿರುವ ಭಯೋತ್ಪಾದನೆ, ವಾಸನೆಯುಕ್ತ ಉನ್ಮಾದ, ಅತಿರೇಕ ಸ್ವೇಚ್ಛಾಚಾರಗಳು, ಅನೀತಿ ನಿರೂಪಣೆಗಳು ಇವುಗಳನ್ನು ಹತ್ತಿಡುವ ಶಕ್ತಿ ಶಿಕ್ಷಣದಲ್ಲಿದೆ., ಕೇವಲ ಹೇಳಿಕೆಯೊಂದೇ ಜೀವನದ ಗುರಿ ಯೆಂದು ಬೋಧಿಸುವ ಶಿಕ್ಷಣವು ಬಡವರಿಗೆ, ನಿರ್ಗತಿಕರಿಗೆ ನೆರವು ನೀಡುವ ಗುಣಗಳನ್ನು ಬೆಳೆಸುವ ಸಂಸ್ಕಾರ ಕಾಣ ಬರುತ್ತಿಲ್ಲ. 'ಶಿಕ್ಷಣವು ಕೇವಲ ಜೀವಿಸುವುದಕ್ಕಾಗಿ ಮಾತ್ರವಲ್ಲ ಜೀವನಕ್ಕಾಗಿಯೂ ಇದೆ' ಎಂಬ ಅರಿವು ಮೂಡಬೇಕಾಗಿದೆ. ಪ್ರಸ್ತುತದಲ್ಲಿ ಮತ್ತು ಭವಿಷ್ಯದಲ್ಲಿ ಜೀವನ ಎಷ್ಟೊಂದು ಸಂಕೀರ್ಣವಾಗುತ್ತಿದೆಂದರೆ, ಪ್ರಪಂಚದಲ್ಲಿ ಮೌಲ್ಯಯುತ ಶಿಕ್ಷಣದಿಂದ ಯುವಕರು ವಂಚಿತರಾಗುತ್ತಿದ್ದಾರೆ. ಹಿರಿಯರ, ಗುರುಗಳ ಮಾತನ್ನೇ ಧಿಕ್ಕರಿಸುವ, ನೈತಿಕತೆಯನ್ನೇ ಗಾಳಿಗೆ ತೂರುವ, ಅಡ್ಡದಾರಿಯೇ ಸರಿಯೆಂದು ನಂಬುವ ವಿಚಿತ್ರ ಭ್ರಮೆಯಲ್ಲಿ ಮುಳುಗಿದ್ದಾರೆ. ಹಾಗಾಗಿ ಎಲ್ಲಿ ಶಿಕ್ಷನದ ಕೊರತೆ ಯಿದೆಯೋ ಅಲ್ಲಿ ಊಹಾಪೋಹಗಳು, ಕಂದಾಚಾರಗಳು, ಮೂಢನಂಬಿಕೆಗಳು, ವಿನಾಕಾರಣ ಜಗಳ-ತಂಟೆ-ತಕರಾರುಗಳು ವ್ಯಾಪಕವಾಗಿರುತ್ತವೆ. ಇಂಥವರ ಮೇಲೆ ಹಿತಚಿಂತಕರಾದವರು ಒಂದು ಕಣ್ಣಿಟ್ಟಿರಬೇಕು. ಅಂದರೆ ಹಿಂದಿಗಿಂತ ಇಂದು ಯುವಕರಿಗೆ ಬದುಕನ್ನು ಕಟ್ಟಿಕೊಡುವ ಮೌಲ್ಯಯುತ ಶಿಕ್ಷಣ ನೀಡಬೇಕಾಗಿರುವ ಆಲೋಚನೆಗಳು ತೀವ್ರವಾಗಬೇಕು.

ಹಿಂದೆ ಶಾಂತಿಗಾಗಿ ಯುದ್ಧಗಳು ಸಂಭವಿಸುತ್ತಿದ್ದವು. ಆದರೆ ಇಂದು ಶಾಂತಿಗಾಗಿ ಶಾಂತಿಯ ಶಿಕ್ಷಣವನ್ನೇ ಬೋಧಿಸಬೇಕಾಗಿದೆ. ಕಾರಣ ಹಿಂದೆ ಅಣ್ವಸ್ತ್ರಗಳಿರಲಿಲ್ಲ. ಮನುಷ್ಯ-ಮನುಷ್ಯ ತಮ್ಮ ಹೋರಾಟದಲ್ಲಿ ಪರಿಸರ ನಾಶವಿಲ್ಲದೇ ಶಾಂತಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದ. ಆದರೆ ಇಂದು ವಿಷಯುಕ್ತ ಅಣ್ವಸ್ತ್ರಗಳಿಂದ ಮೂಲೆಯಲ್ಲಿ ಕೂತು ಮನುಷ್ಯ ಜನಾಂಗದೊಂದಿಗೆ ಇಡೀ ಪರಿಸರ ನಾಶಕ್ಕೂ ಲಗ್ಗೆ ಹಾಕಿದ್ದಾನೆ. ಎಂತಲೇ ಶಿಕ್ಷಣದಲ್ಲಿ ಸಮಾಜ ವನ್ನು ಕಾಪಾಡುವ ಕಾಳಜಿ ಇನ್ನಷ್ಟು ಮೌಲ್ಯಯುತವಾಗಿ






ನೆಲೆಗೊಳ್ಳಬೇಕಾಗಿದೆ. ಮನುಷ್ಯರಲ್ಲಿ ಸಮಾನ ಭ್ರಾತೃತ್ವ ಹೊಂದುವ, ಸರ್ವತೋಮುಖಾಭಿವೃದ್ಧಿ ಕಂಡುಕೊಳ್ಳುವ ನೀತಿಪಾಠ ಶಿಕ್ಷಣದ ಮೂಲಗಳಲ್ಲೊಂದಾಗಿದೆ. ಹಿಂದೆ ನಮ್ಮ ಹಾಗೆ ಓದು-ಬರಹ ಬಾರದ ಒಬ್ಬ ಹಳ್ಳಿಗಾಡಿನ ಮಹಿಳೆ ತನ್ನ ಮಗು ಏನಾಗಬೇಕೆಂದು ಹೀಗೆ ಆಶಿಸುತ್ತಿದ್ದಳು;

*ಆಚಾರಕ್ಕರಸಾಗು ನೀತಿಗೆ ಪ್ರಭುವಾಗು*
*ಮಾತಿನಲಿ ಚುಡಾಮಣಿಯಾಗು / ನನ್ನ ಕಂದ*
*ಜ್ಯೋತಿಯೇ ಆಗು ಜಗಕೆಲ್ಲ.*

ತನ್ನ ಮಗು ಲಕ್ಷಾಂತರ ಸಂಪಾದಿಸುವ ದೊಡ್ಡ ಅಧಿಕಾರಿಯೇ ಆಗಬೇಕಿಲ್ಲ. ಬದಲಾಗಿ ಬದುಕಿಗೆ ಸುಖ ತಂದುಕೊಡುವ ಜೀವನ ಮೌಲ್ಯಗಳಾದ ಆಚಾರ, ವಿಚಾರ, ರೀತಿ-ನೀತಿಗಳಿಗೆ ಅರಸನಾಗಬೇಕೆಂದು, ಮಾತಿನ ಮೂಲಕ ಎಲ್ಲರ ಮನಸ್ಸನ್ನು ಗೆಲ್ಲಬೇಕೆಂದು ಆಶಿಸುತ್ತಾಳೆ.

ಬ್ರಿಟನ್ನಿನ ಟೋನಿ ಬ್ಲೇರ್ ಎಂಬುವವರು ಚುನಾವಣೆಯಲ್ಲಿ ಗೆದ್ದು ಅಧಿಕಾರವಹಿಸಿಕೊಂಡ ಕೂಡಲೇ ತಮ್ಮ ಮೊದಲ ಭಾಷಣ ಮಾಡುತ್ತಾ 'ನನ್ನ ಪ್ರಥಮ ಪ್ರಾಶಸ್ತ್ಯ ಶಿಕ್ಷಣ, ದ್ವಿತೀಯ ಪ್ರಾಶಸ್ತ್ಯ ಶಿಕ್ಷಣ, ತೃತೀಯ ಪ್ರಾಶಸ್ತ್ಯವೂ ಶಿಕ್ಷಣ' ಎಂದು ಹೇಳಿದರಂತೆ. ಅಂದರೆ ಶಿಕ್ಷಣಕ್ಕಿದ್ದ ಅವರಲ್ಲಿನ ಆದ್ಯತೆಯ ಬಗ್ಗೆ ತಿಳಿದು ಬರುತ್ತದೆ. ಅದೇ ರೀತಿ ಸುಮಾರು ೨೮ ವರ್ಷ ಜೈಲುವಾಸ ಅನುಭವಿಸಿ ಬಿಡುಗಡೆ ಹೊಂದಿದೆ ನೆಲ್ಸನ್ ಮಂಡೇಲಾರವರು ಕಪ್ಪು ಜನರನ್ನುದ್ದೇಶಿಸಿ ಮಾತಾಡುತ್ತಾ, 'ಕರಿಯರ ಉದ್ಧಾರವು ವಿದ್ಯಾವಂತರಾಗುವುದಲ್ಲಿ ಮೌಲ್ಯಯುತ ಮತ್ತು ಪರಿಪೂರ್ಣ ಶಿಕ್ಷಣ ಪಡೆದುಕೊಳ್ಳುವುದರಲ್ಲಿ' ಎಂದು ನುಡಿದರಂತೆ. ಹಾಗೆಯೇ ನಮ್ಮಲ್ಲಿ ಗಾಂಧೀಜಿಯವರು 'ಒಳ್ಳೆಯ ಶಿಕ್ಷಣದಿಂದ ಅನಾರೋಗ್ಯ, ಅಸಮಾನತೆ, ಅಸಮರ್ಥತೆ, ಅಪನಂಬಿಕೆಗಳನ್ನು ಬುಡ ಸಮೇತ ಹೋಗಲಾಡಿಸಲು ಸಾಧ್ಯ' ಎಂದು ಹೇಳಿದ್ದಾರೆ. ರಾಷ್ಟ್ರಕವಿ ಕುವೆಂಪುರವರು ಶಿಕ್ಷಣ ಕುರಿತು ಹೀಗೆ ಹೇಳಿದ್ದಾರೆ. 'ಪ್ರತಿಯೊಂದು ಮಗುವು ಹುಟ್ಟುತ್ತಲೇ ವಿಶ್ವಮಾನವವಾಗಿರುತ್ತದೆ. ನಾವು ಅದನ್ನು ಬೆಳೆಸುತ್ತಾ 'ಅಲ್ಪಮಾನವ' ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು ವಿಶ್ವಮಾನವನನ್ನಾಗಿ ಮಾಡುವುದೇ ಮೌಲ್ಯಯುತವಾದ ಶಿಕ್ಷಣದ ಕರ್ತವ್ಯವಾಗಬೇಕು' ಅದೇ ರೀತಿ ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಅವರು 'ಶಿಕ್ಷಣದಿಂದ ಸಂಘಟನೆ, ಸಂಘಟನೆಯಿಂದ ಹೋರಾಟ, ಹೋರಾಟದಿಂದ ನೆಮ್ಮದಿ' ಹೀಗೆ ಈ ಮೂರು ಮಂತ್ರಗಳಿಂದ ಯಾವುದೇ ಜನಾಂಗದ ಏಳ್ಗೆ ಸಾಧ್ಯವೆಂಬ ಮಾತನ್ನು ಒತ್ತಿ ಹೇಳಿದ್ದಾರೆ. ವಿಶ್ವವಿಖ್ಯಾತ ತತ್ವಜ್ಞಾನಿಯಾದ ಸಾಕ್ರೆಟಿಸ್ ಒಂದು ಕಡೆ ಹೀಗೆ ಹೇಳಿದ್ದಾನೆ. 'ಶಿಕ್ಷಣವಿಲ್ಲದ ಮಗು ಇರುವುದಕ್ಕಿಂತಲೂ ಮಗುವಿಲ್ಲವಿರುವುದೇ ಲೇಸು' ಎಂದು.

ಮೌಲ್ಯಯುತವಾದ ಶಿಕ್ಷಣವು ಮನುಕುಲದ ಜೀವಾಳವಾಗಿದೆ. ಸುವ್ಯವಸ್ಥಿತ ಶಿಕ್ಷಣದ ತಿಳುವಳಿಕೆಯಿಂದ ಮನುಷ್ಯ ನಾಗರಿಕತೆಯ ಮಟ್ಟವನ್ನು ಮುಟ್ಟಲು ಸಾಧ್ಯ. ನಮ್ಮ ದೇಶದಲ್ಲಿ ವಿದ್ಯೆಗೆ ಅಂದರೆ ಶಿಕ್ಷಣಕ್ಕೆ ಪ್ರಾಚೀನಕಾಲದಿಂದಲೂ ಮೊದಲ ಆದ್ಯತೆ ಇರುವುದನ್ನು ಕಾಣುತ್ತೇವೆ. ಋಗ್ವೇದದಲ್ಲಿ ಒಂದು ಮಾತಿದೆ. ಅದೇನೆಂದರೆ 'ಮನುಷ್ಯನನ್ನು ಸ್ವಾವಲಂಬಿ ಮತ್ತು ಸ್ವಾರ್ಥರಹಿತನನ್ನಾಗಿ ಮಾಡುವುದೇ ಶಿಕ್ಷಣ'. ಶಿಕ್ಷಣ ಕ್ಷೇತ್ರಕ್ಕೆ ಅಗ್ರಮಾನ್ಯ ಸ್ಥಾನ ಕಲ್ಪಿಸಿಕೊಟ್ಟ ನಮ್ಮ ಪೂರ್ವಜರು 'ವಿದ್ಯಾವಿಹೀನಃ ಪಶುಭಿಃ ಸಮಾನ' ಎಂದಿದ್ದಾರೆ. 'ವಿದ್ಯೆ ಇಲ್ಲದ ಮಗುವು ಬುದ್ಧಿಯಿಲ್ಲದ ತಂದೆ, ಬಿದ್ದಿರಲು ಬಂದು ನೋಡದಾ ತಾಯಿಯು ಶುದ್ಧವೈರಿಗಳೆಂದು' ಸರ್ವಜ್ಞನೂ ಶಿಕ್ಷಣದ ಮಹತ್ವವನ್ನು ಸಾರಿದ್ದಾನೆ. ಹಾಗೆಯೇ 'ವಿದ್ಯೆ ಇಲ್ಲದವನು ಹದ್ದಿಗಿಂತ ಕಡೆ', 'ದುಡ್ಡೇ ದೊಡ್ಡಪ್ಪನಾದರೂ ವಿದ್ಯೆ ಅವರಪ್ಪ' ಎಂಬಂತಹ ನಾಣ್ಣುಡಿಗಳು ಶಿಕ್ಷಣದ ಮಹತ್ವವನ್ನು ಸಾರುತ್ತವೆ. ಶಿಕ್ಷಣವೆಂಬುದು ಆಯಾ ದೇಶದ ಅಂತಃಸ್ಸತ್ವದ ಪ್ರತೀಕವಾಗಿರುವುದರಿಂದ ಇದನ್ನರಿತ ವಿಶ್ವ ಸಂಸ್ಥೆಯು ಕ್ರಿ.ಶ. ೨೦೨೦ರಷ್ಟೊತ್ತಿಗೆ ಎಲ್ಲ ರಾಷ್ಟ್ರ-ರಾಜ್ಯಗಳೆಲ್ಲ ಸಂಪೂರ್ಣ ಸಾಕ್ಷರತೆ ಸಾಧಿಸುವ ಗುರಿ ಹೊಂದಿದೆ. ಇದಕ್ಕೆ ಪ್ರತಿಯೊಬ್ಬರ ಸಹಾಯ ಆಸಕ್ತಿ ಬೇಕೆಂದು ಅದು ಈಗಾಗಲೇ ಹೇಳಿಕೆಯೊಂದು ನೀಡಿದೆ.

ಪ್ರಾಚೀನ ಭಾರತದ ಶಿಕ್ಷಣವು ಮೂಲತಃ ಮೌಲ್ಯಯುತವಾಗಿತ್ತಲ್ಲದೆ, ಆಧ್ಯಾತ್ಮಿಕ ವಿದ್ಯೆಯ ಜೊತೆಗೆ ಸ್ವಲ್ಪ ಲೌಕಿಕ ಶಿಕ್ಷಣದ ಅವಶ್ಯಕತೆ ಕಾಣಲ್ಪಡುತ್ತಿತ್ತು. ಮನುಷ್ಯ ಪರಮಾತ್ಮನ ಪರಿಪೂರ್ಣ ರೂಪದ ಒಂದು ಅಣು ವಾಗಿದ್ದಾನೆ. ಆದ್ದರಿಂದ ಮಗು ಏನೂ ತಿಳಿಯದ, ಏನೂ ಇಲ್ಲದ, ಕೇವಲ ಖಾಲಿ ವ್ಯಕ್ತಿಯಾಗಿರುವುದಿಲ್ಲ. ಅದು ಸರ್ವಶಕ್ತಿ ಸಂಪನ್ನತೆಯ ಒಂದು ಚೈತನ್ಯವಾಗಿರುತ್ತದೆ. ಅದಕ್ಕೆ ಮುಸುಕಿರುವ ಆವರಣವನ್ನು ಪರಿಹರಿಸುವ ಶುಭ್ರ ವಾದ ಕೆಲಸವೇ ಶಿಕ್ಷಣದ ಗುರಿಯಾಗಿರುತ್ತದೆ. ಪ್ರತಿಯೊಬ್ಬ ರಿಗೆ ತಾನು ಯಾರು? ತನ್ನ ಅವಶ್ಯಕತೆ ಮತ್ತು ಗುರಿ ಏನು? ತಾನು ಆತ್ಮಸ್ವರೂಪನೆ?



ಸರ್ವಶಕ್ತಿ ಸಂಪನ್ನನೇ? ಎಂಬ ಅರಿವನ್ನು ಪಡೆಯುವಂತೆ ಮಾಡುವುದೇ ನಿಜ ವಾದ ಶಿಕ್ಷಣದ ಗುರಿ. ಲೌಕಿಕ ಶಿಕ್ಷಣದ ಕಲಿಕೆಯ ಜೊತೆ ಜೊತೆಗೆ ಅಲೌಕಿಕ ಶಿಕ್ಷಣದತ್ತ ಮಗುವನ್ನು ಮುನ್ನಡೆಸು ವಂತಾಗಬೇಕು. ಇಂದು ನಮ್ಮ ಪರಂಪರೆಯಲ್ಲಿ ಧರ್ಮ, ಪಂಗಡ, ಪ್ರಾದೇಶಿಕತೆ, ಬೇಧ-ಭಾವವಳು ತುಂಬಿಕೊಂಡಿವೆ. ಈ ಎಲ್ಲ ಅಸಮಾನತೆಗಳ ಅಳಿಸಿ ಸಮಾನತೆಯ ಮೌಲ್ಯವನ್ನು ಶಿಕ್ಷಣದ ಮೂಲಕ ತರಬೇಕು.

ಆಧುನಿಕ ಕಾಲದ ಅಥವಾ ಯಾಂತ್ರೀಕೃತ ಜಗತ್ತಿನ ಸ್ಪರ್ಧಾತ್ಮಕ ಓಟದಲ್ಲಿ ನಮ್ಮ ಶಿಕ್ಷಣದ ಗುರಿ ಮುಖ್ಯವಾಗಿ ಲೌಕಿಕ ಶಿಕ್ಷಣ ಕಡೆಗೇನೆ ಸಾಗಲ್ಪಟ್ಟಿದೆ. ಅಂದರೆ ಬಾಹ್ಯ ಲೋಕದ ಪರಿಜ್ಞಾನ, ದೇಹೀಂದ್ರಿಯಗಳ ಭೋಗ ಮಾಹಿತಿ ಗಳ ಸಂಗ್ರಹ ಮುಂತಾದ ಲೌಕಿಕತೆಯ ಪರಿಭಾಷೆಗೆ ಮಾತ್ರ ಇಂದಿನ ಶಿಕ್ಷಣ ಮೀಸಲಾಗುತ್ತಿರುವುದು ಶೋಚನೀಯ. ಇದರಾಚೆಗೆ ನೈತಿಕ ಶಿಕ್ಷಣ, ಆತ್ಮಶಿಕ್ಷಣ, ಮಾನವೀಯ ಶಿಕ್ಷಣ ಧರ್ಮಶಿಕ್ಷಣಕ್ಕೂ ಒತ್ತು ಕೊಡಬೇಕಾಗಿದೆ. ಕೇವಲ ಹೊಸ ಹೊಸ ಸಂಗತಿಗಳನ್ನು ಮಗುವಿನ ತಲೆಯೆಂಬ ಖಾಲಿ ಚೀಲದಲ್ಲಿ ತುಂಬಿ 'ಬುದ್ಧಿವಂತ'ನನ್ನಾಗಿಸಬಹುದೇ ಹೊರತು ನಿಜವಾದ ಸಂಸ್ಕಾರ ಆ ಮಗುವಿಗೆ ದೊರೆತಿರು ವುದಿಲ್ಲ. ಮುಖ್ಯವಾಗಿ ಸಾಮಾಜಿಕ ಪರಿಜ್ಞಾನ, ರಾಷ್ಟ್ರೀಯ ಪ್ರಜ್ಞೆ ಮೂಡಿದೆಯೇ ಎಂಬ ಪ್ರಶ್ನೆ ಹಾಕಿದಾಗ ಇಲ್ಲ ಇಲ್ಲ ವೆಂದೇ ಉತ್ತರ ಬರುತ್ತದೆ. ಹಾಗಾದರೆ ನಾವು ಕೊಡುವ, ಕಲಿಸುವ ಶಿಕ್ಷಣ ಎಂಥದ್ದು? ಇದರ ಪರಿಣಾಮ ಇಂದು ಏನಾಗುತ್ತಿದೆ? ಸಾಮಾಜಿಕ ಕ್ಷೋಭೆ, ವೈಷಮ್ಯ, ಕೋಪ, ವಿರಸ, ಮೋಸ, ಘರ್ಷಣೆ, ಅಶಾಂತಿ, ಅಸಮಾಧಾನಗಳೇ ತಲೆಯೆತ್ತಿ ನಿಂತಿವೆ. ಇಂದಿನ ಶಿಕ್ಷಣ ಯುವಪೀಳಿಗೆಯ ಮೇಲೆ ಪ್ರಯೋಗ ಮಾಡುವ ಅಸ್ತ್ರವಾಗುತ್ತಿವೆಯಾದ್ದರಿಂದ ಅವರ ಚಿತ್ತ ಮುರಾಬಟ್ಟೆಯಾಗಿದೆ. ತಾನು ಈ ದೇಶದ ಪ್ರಜೆಯಾಗಿರು ವುದರಿಂದ ಸ್ವಾವಲಂಬನೆ-ಸಹಕಾರಗಳಿಂದ ತನ್ನ ಅಭ್ಯುದಯವನ್ನು ತಾನೇ ಮಾಡಿಕೊಳ್ಳಬೇಕು. ಸಾಮಾಜಿಕ ಶಾಂತಿಗೆ ತಾನೂ ಕಾರಣವಾಗಬೇಕು ಎಂಬುದನ್ನು ತಿಳಿಸಿಕೊಡುವಲ್ಲಿ ಇಂದಿನ ಶಿಕ್ಷಣ ವಿಫಲವಾಗಿದೆ. ಅದರಲ್ಲೂ ಈವತ್ತಿನ ಮಾಧ್ಯಮಗಳ ಒತ್ತಡದಲ್ಲಿ ಚಿತ್ರ ವಿಚಿತ್ರ ವೈಭಕೀರಣದ ಆಕರ್ಷಣೆಯ ಸುಳಿಯಲ್ಲಿ ಚಿಂತನೆ ಕಳೆದುಕೊಂಡ ಯುವಪೀಳಿಗೆಯ ಮನಸ್ಸು ನಿಜಕ್ಕೂ ಅಸ್ವಸ್ಥವಾಗಿದೆ. ಮೊದಲು ಮಾಧ್ಯಮಗಳು ಬಹಳಷ್ಟು ಸುಧಾರಣೆಯಾಗ ಬೇಕು. ಅಲ್ಲದೇ ಶಾಲಾ-ಕಾಲೇಜು ಉತ್ತಮ ಮೌಲ್ಯಗಳು ನೇರವಾಗಿ, ಪರೋಕ್ಷವಾಗಿ ಮತ್ತು ಸಮಗ್ರವಾಗಿ ಅಳವಡಿಸುವ ಮೂಲಕ ಪುನರೂಪಿಸಬೇಕಾಗಿದೆ.

ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಕಲಿಕೆಗಾಗಿ ಕಲಿಕೆ ಎಂಬಂತೆ ಕೇವಲ ಅಕ್ಷರವಂತರನ್ನಾಗಿಸುತ್ತದೆಯೇ ಹೊರತು ಹೃದಯವಂತರನ್ನಾಗಿಸುತ್ತಿಲ್ಲ. ಸಾಕ್ಷರರಾದವರು ವಿಪರೀತ ರಾಕ್ಷಸರಂತೆ ವರ್ತಿಸುತ್ತಿರುವುದು ದಿನನಿತ್ಯ ನಾವು ಇದನ್ನು ನೋಡುತ್ತಿದ್ದೇವೆ, ಓದುತ್ತಿದ್ದೇವೆ. ಹಾಗಾಗಿ ನಮಗೆ ಮೌಲ್ಯಾಧಾರಿತ ಶಿಕ್ಷಣ ಇಂದು ತೀರಾ ತುರ್ತಾಗಿದೆ. ಇಲ್ಲದಿದ್ದರೆ ಯುವಕರು ಇನ್ನಷ್ಟು ಅಡ್ಡದಾರಿ ಹಿಡಿದು ಸಾಮಾಜಿಕ ನೆಮ್ಮದಿಗೆ ಭಂಗ ತರುವುದರಲ್ಲಿ ಯಾವ ಅನುಮಾನವಿಲ್ಲ. ಹಿರಿಯರಾದವರು ಇನ್ನಾದರೂ ಎಚ್ಚೆತ್ತುಕೊಳ್ಳದಿದ್ದರೆ ಪರಿಸ್ಥಿತಿ ಯಾವ ಹಂತಕ್ಕೆ ಹೋಗುತ್ತದೆಯೋ ನಿರ್ಧರಿಸ ಲಾಗದು. ಒಟ್ಟಾರೆ ಶಿಕ್ಷಣವು ಕೇವಲ ಕಲಿಯುವಿಕೆಗೆ ಸೀಮಿತ ವಾಗದೇ ನಡಾವಳಿಕೆಯಲ್ಲಿ ವ್ಯಕ್ತವಾಗುವ ಮತ್ತು ಅರ್ಥ ಮಾಡಿಕೊಳ್ಳುವ ಮೌಲ್ಯಗಳು ಅತ್ಯಗತ್ಯ. ಶಿಕ್ಷಣದ ಪ್ರಮುಖ ಉದ್ದೇಶವು ಗುಣಮಟ್ಟವನ್ನು ವೃದ್ಧಿಗೊಳಿಸುವುದಲ್ಲದೆ ಹಾಗೂ ವಿದ್ಯಾರ್ಥಿಗಳಿಗೆ ಮಾಹಿತಿ ಒದಗಿಸುವುದಷ್ಟೇ ಆಗಿರದೇ ಗುಣಾತ್ಮಕ ಪರಿವರ್ತನೆಯನ್ನು ತರುವುದಾಗಿದೆ. ಇಂದು ಮೌಲ್ಯ ಪುನರ್‌ಮನನವು ಶಾಲಾಕಾಲೇಜುಗಳ ಶಿಕ್ಷಣದಲ್ಲಿ ಅಂತರ್ಗತವಾಗುವಂತೆ ಪ್ರಯತ್ನಿಸಬೇಕಾಗಿದೆ. ಆಗ ಭಾರತದ ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಅಭ್ಯುದಯವನ್ನು ಕಾಣಲು ಸಾಧ್ಯವಾದೀತು. ನಾವು ವಿದ್ಯಾರ್ಥಿಗಳ ಭವಿಷ್ಯವನ್ನು ಶಿಕ್ಷಣದ ಮೂಲಕ ಕಟ್ಟಿಕೊಡುವ ಸಂದರ್ಭದಲ್ಲಿ ಸಮಾಜದ ಒಟ್ಟು ಹಿತವನ್ನು ದೃಷ್ಟಿಯಲ್ಲಿಟ್ಟು ಕೊಳ್ಳಬೇಕು. ಹಾಗಾದಾಗ ಮಾತ್ರ ವಿದ್ಯಾರ್ಥಿಗಳು ಸರಿಯಾದ ಮೌಲ್ಯಗಳನ್ನು ಆರಿಸಿಕೊಳ್ಳುವ ಸಮರ್ಥ್ಯವನ್ನು ಪಡೆದು ಕೊಳ್ಳುತ್ತಾರೆ.

ಮಾಡುವಾತ ನಾನಲ್ಲಯ್ಯಾ, ನೀಡುವಾತ
ನಾನಲ್ಲಯ್ಯಾ, ಬೇಡುವಾತ ನಾನಲ್ಲಯ್ಯಾ, ನಿಮ್ಮ
ಕಾರುಣ್ಯವಲ್ಲದೆ, ಎಲೆ ದೇವಾ, ಮನೆಯ ಹೊತ್ತು
ಆಲಸಿದಡೆ ಒಡತಿ ಮಾಡಿಕೊಂಬಂತೆ ನಿನಗೆ ನೀ
ಮಾಡಿಕೊ, ಕೂಡಲಸಂಗಮದೇವಾ.

– ಬಸವಣ್ಣ







## ಜಂಗಮಪ್ರವಾಸ ಕಥನ

– ಕೋ.ರಂ. ಬಸವರಾಜು *

ಉತ್ತರ ಭಾರತ ಪ್ರವಾಸದ ಮುನ್ನ ದಿನಾಂಕ ೪, ೫ ಡಿಸೆಂಬರ್ ೨೦೧೧ ಎರಡು ದಿನಗಳ ಲಘು ಪ್ರವಾಸವನ್ನು ಕೈಗೊಳ್ಳಲಾಗಿತ್ತು. ದಿನಾಂಕ ೦೪-೦೫-೨೦೧೧ರ ಬೆಳಿಗ್ಗೆ ಹೊರಟು ಕೋಲಾರದ ಸಮೀಪದಲ್ಲಿರುವ ಅಂತರಗಂಗೆ ನೋಡಿದೆವು. ಬೇಗೆಯ ಭೂಮಿಯ ಆ ನೆಲದಲ್ಲಿ ಅದೊಂದು ಶೀತಲಗಂಗೆಯ ತಾಣವಾಗಿದೆ. ಅಷ್ಟು ಎತ್ತರ ವಲ್ಲದ ಗುಡ್ಡದ ಮೇಲೆ ಶೀತಲಜಲ ಬಸವಮೂರ್ತಿಯ ಎಡಭಾಗದಿಂದ ಧುಮುಕುತ್ತದೆ. ಆ ನಂದಿವಿಗ್ರಹವನ್ನು ನೀರು ಧುಮುಕುವ ಜಾಗದಲ್ಲಿ ಸ್ಥಾಪಿಸಿದಂತಿದೆ. ಅದೇನೇ ಆದರೂ ಆ ತಾಣ, ಆ ಗಂಗಾ ಪಾನ ಮನಕ್ಕೆ ದೇಹಕ್ಕೆ ಮುದಕೊಡುತ್ತದೆ.

ನಂತರ ಮುಂದೆ ಪ್ರಯಾಣ ಬೆಳೆಸಿ ಮಾರ್ಗಮಧ್ಯೆ ಮಧ್ಯಾಹ್ನಿಕದ ಪೂಜೆ ಪ್ರಸಾದಗಳಿಗಾಗಿ ಸುಂದರವಾದ ಆರಾಮದಲ್ಲಿ ತಂಗಿದೆವು. ಅಲ್ಲಿ ಶ್ರೀ ಶ್ರೀ ಸಿದ್ಧಲಿಂಗಮಹಾ ಸ್ವಾಮಿಗಳವರು ಎಲ್ಲ ಶಿಷ್ಯರು ಹಾಗೂ ಚರಮೂರ್ತಿ ಗಳೊಡನೆ ಬಯಲಲ್ಲಿ ಬಯಲಿನ ಸಾಕಾರಮೂರ್ತಿಯಾದ ಇಷ್ಟಲಿಂಗದ ಅರ್ಚನೆ ಅರ್ಪಣೆ ಅನುಭಾವವನ್ನು ಮಾಡಿದರು. ಅದು ತೋಂಟದ ಸಿದ್ಧಲಿಂಗೇಶ್ವರರು ತಮ್ಮ ನೂರೊಂದು ಚರಮೂರ್ತಿಗಳ ಜೊತೆಯಲ್ಲಿ ದೇಶಸಂಚಾರ ಸಮಯದಲ್ಲಿ ಮಾಡುತ್ತಿದ್ದ ಅರ್ಚನೆ ಅರ್ಪಣೆ ಅನುಭಾವಾದಿ ಗಳನ್ನು ನೆನಪಿಗೆ ತರುವಂತಿತ್ತು.

ಮುಂದೆ ಪಯಣಿಸಿ ಶ್ರೀಮಠದಲ್ಲಿ ಸೇವೆ ಸಲ್ಲಿಸಿದ ನಿಷ್ಕಾಮ ಸೇವಾಮೂರ್ತಿ ಸರಳ ಸಜ್ಜನಿಕೆಯ ಸಾಕಾರ ಮೂರ್ತಿ ಸೌಜನ್ಯಸಾಗರ ಶ್ರೀ ಕೃಷ್ಣಯ್ಯಶೆಟ್ಟರನ್ನು ಅವರ ಮನೆಯಲ್ಲಿ ಕಂಡೆವು. ಅನಿರೀಕ್ಷಿತವಾಗಿ ಇಷ್ಟೊಂದು ಜನ ಜಂಗಮರ ದರ್ಶನ ಏಕಕಾಲಕ್ಕೆ ದೊರೆತುದದಕ್ಕಾಗಿ ಆ ಕಾಯಕಯೋಗಿ ಸ್ವರ್ಗೀಯವಾಗಿ ಸಂಭ್ರಮಿಸಿದರು. ಕಿರಿಯ ಶ್ರೀಗಳವರ ದರ್ಶನದಿಂದ ಹಿರಿಹಿರಿ ಹಿಗ್ಗಿದ. ಮನೆಯ ವರೆಲ್ಲಾ ಮಹದಾನಂದಪಟ್ಟರು. ಆ ನಿಸ್ಪೃಹಯೋಗಿ ಶ್ರೀಗಳವರ ಆಶೀರ್ವಾದವೊಂದನ್ನು ಬಿಟ್ಟು ಬೇರಾವ ಶಾಲು ಹಾರಾದಿಗಳನ್ನು ಸ್ವೀಕರಿಸಲೇ ಇಲ್ಲ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಿರುಪತಿ ದರ್ಶನಕ್ಕಿಂತ ಮೊದಲು ಕೃಷ್ಣಯ್ಯ ಶೆಟ್ಟರನ್ನು ನೋಡಬೇಕೆಂದು ಸಂಕಲ್ಪಿಸಿದ್ದನ್ನು ನೆನೆದಾಗ ಈ ಸಂಗತಿ ನೆನಪಿಗೆ ಬರುತ್ತದೆ. ಒಂದು ಸಾರಿ ಕನ್ನಡ ಕಣ್ವ ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರು ಬಿಜಾಪುರಕ್ಕೆ ಹೋಗುತ್ತಾರೆ. ಅಲ್ಲಿ ಅವರನ್ನು ಬರಮಾಡಿ ಕೊಂಡ ವ್ಯಕ್ತಿ ಮೊದಲು ಅಲ್ಲಿನ ಅದ್ಭುತವಾದ ಗೋಲ್ ಗುಂಬಸ್‌ನ್ನು ನೋಡಬನ್ನಿ ಎನ್ನುವನು. ಆಗ ಬಿ.ಎಂ. ಶ್ರೀ ಈ ಊರಿನಲ್ಲೊಂದು ವಚನ ಗುಮ್ಮಟ ಇದೆ. ಅದನ್ನು ಮೊದಲು ನಾನು ನೋಡಬೇಕು ನಡಿ ಎನ್ನುವರು. ಆ ವಚನ ಗುಮ್ಮಟವೇ ಫ.ಗು. ಹಳಕಟ್ಟಿ, ಇದರಂತೆ ಇಲ್ಲಿ ಕಿರಿಯ ಶ್ರೀಗಳೂ ಕೂಡ 'ಸಪ್ತಗಿರಿಯ ಶ್ರೀಪತಿಯನ್ನು ನೋಡುವ ಮೊದಲು ಅಣ್ಣನವರ ಸಪ್ತಶೀಲದ ಕೃಷ್ಣಯ್ಯ ಶೆಟ್ಟಿಯನ್ನು ನೋಡೋಣ ನಡೆಯಿರಿ ಎನ್ನುವರು.

ಮುಂದಿನ ನಮ್ಮ ಪಯಣ ತಿರುಪತಿಗೆ. ಶ್ರೀ ತಿರುಪತಿ ಶ್ರೀಪತಿಯ ಶ್ರೀನಿಧಿಯ ತಾಣ. ಸುಂದರವಾದ ಉತ್ತುಂಗ ವಾದ ಏಳು ಗಿರಿಗಳ ಮೇಲೆ ಪ್ರಕೃತಿಯ ಒಡಲಲ್ಲಿರುವ ಚೆಲುವಿನ ಕ್ಷೇತ್ರ, ಅಲ್ಲಿ ಹಗಲು ಇರುಳುಗಳಲ್ಲಿ ಇರುವೆಗಳಂತೆ ಭಕ್ತರು ಹರಿದಾಡುತ್ತಿರುತ್ತಾರೆ. ಆ ಭಕ್ತ ಇರುವೆಗಳಿಗೆ ಆ ದೇವಾಲಯದ ವಾತಾವರಣದ ತುಂಬಾ ಮೋಕ್ಷ ಘೃತದ ವಾಸನೆ ಬೀರುತ್ತದೆ. ಇಂಥ ವಾತಾವರಣದ ರಾತ್ರಿ ಅಲ್ಲಿ ನಾವು ಎಲ್ಲರೂ ತಂಗಿ ೦೫-೧೧-೨೦೧೧ರ ಬ್ರಾಹ್ಮೀ ಮುಹೂರ್ತ ಬರುವ ಮುನ್ನವೇ ಎದ್ದು ಸ್ನಾನಪೂಜಾದಿ ಗಳನ್ನು ನಿರ್ವರ್ತಿಸಿ ತಿಮ್ಮಪ್ಪನ ದರ್ಶನಕ್ಕೆ ಸಾಲಿನಲ್ಲಿ ನಿಂತೆವು. ಆತ್ಮಾರ್ಥಪೂಜಾನಿಷ್ಠರಾದ ಸಾಮಾನ್ಯ ಹಾಗೂ ವಿಶೇಷ ನಿರಾಭಾರಿ ವೀರಶೈವರಿಗೆ ಅನ್ಯದೈವದರ್ಶನ ನಿಷಿದ್ಧ ವಾದರೂ ಉಪಚಾರಾರ್ಥವಾಗಿ ಸಾದಾಖ್ಯ ಸೌಂದರ್ಯಾ ದಿಗಳನ್ನು ನೋಡುವುದು ತಪ್ಪಾಗಲಾರದು. ಹೀಗೆಂದು ಭಾವಿಸಿ ತಿಮ್ಮಪ್ಪನ ದರ್ಶನವನ್ನು ವಿಶೇಷ ದರದ ಸಾಲಿನಲ್ಲಿ ನಿಂತು ಬೆಳಿಗ್ಗೆ ೫.೦೦ ಗಂಟೆಗೆ ದರ್ಶನ ಮಾಡಿದೆವು. ಧರ್ಮದರ್ಶನದ ಸಾಲಿನಲ್ಲಿ ಬಂದವರೂ, ದುಡ್ಡೂ ತೆತ್ತು

* ನಿವೃತ್ತ ಪ್ರಾಧ್ಯಾಪಕರು, ಮಧುಕೇಶ್ವರ ನಿಲಯ , ಎಸ್.ಐ.ಟಿ. ೫ನೇ ಅಡ್ಡರಸ್ತೆ, ಎಸ್.ಐ.ಟಿ. ಬಡಾವಣೆ, ತುಮಕೂರು.

ವಿಶೇಷ ಹತ್ತಿರದ ಸಾಲಿನಲ್ಲಿ ಬಂದವರೂ ಎಲ್ಲರೂ ದೇವರ ಹತ್ತಿರ ಬಂದಾಗ ಒಂದೇ ಕಡೆ ಕೂಡಿಕೊಳ್ಳುತ್ತಾರೆ. ಇದು ಬೇರೆ ಬೇರೆ ಮಾರ್ಗಗಳಿಂದ ಬಂದರೂ ಕೂಡುವುದು ಭಗವಂತನ ಸನ್ನಿಧಿಯಲ್ಲಿಯೇ ಎಂಬ ಸಂದೇಶವನ್ನು ಸಾರುವಂತಿದೆ. ಇನ್ನು ಗೋಪುರ ಗರ್ಭಗುಡಿ ಬಿತ್ತಿ ಪ್ರಾಕಾರದ ಭಾಗಗಳು ಸುವರ್ಣರೇಖಾಚ್ಛಾದಿತವಾಗಿರುವುದನ್ನು ಗಮನಿಸಿದಾಗ ವಿಜಯನಗರದ ಅರಸನಾದ ಕೃಷ್ಣದೇವ ರಾಯನಿಂದ ಹಿಡಿದು ಇಲ್ಲಿಯವರೆಗೆ ಕ್ರೋಢೀಕರಣವಾದ ಶ್ರೀ ಸಂಪತ್ತು ಗೋಚರಿಸುವಂತಿದೆ. ದೇವಾಲಯಕಟ್ಟಡದ ಪ್ರತಿಕಲ್ಲಿನಲ್ಲಿಯೂ ತೆಲುಗುಭಾಷೆಯಲ್ಲಿ ಕೆತ್ತಿರುವ ಶಾಸನಗಳು ಕಂಡು ಬರುತ್ತವೆ. ದೇವಾಲಯದ ಗರ್ಭಗುಡಿಯಲ್ಲಿನ ಮೂರ್ತಿಯು ವಿದ್ಯುತ್ ದೀಪದ ಬೆಳಕಿನಲ್ಲಿ ಬೆಳಗದೇ ನಂದಾದೀಪದ ಬೆಳಗಿನಲ್ಲಿ ಹೊಳೆಯುತ್ತಿರುವುದೊಂದು ವೈಜ್ಞಾನಿಕವಾಗಿಯೂ ವಿಶೇಷವಾಗಿದೆ. ಇನ್ನು ಆ ತಾಣದ ಪ್ರಕೃತಿಯ ರುದ್ರರಮಣೀಯ ಚೆಲುವಂತೂ ಮನಕಲ್ಪಿಸಿಕೊಳ್ಳುವ ತನಕ, ಕಣ್ಣು ನೋಡುವ ತನಕ ಚೆಲುವರಿದಿದೆ. ಅಂತು ಒಟ್ಟಿನಲ್ಲಿ ಆ ದೈವ ಸನ್ನಿಧಿಯಲ್ಲಿ ಒಂದು ಪರಿಯ ದಿವ್ಯಾನುಭೂತಿಯುಂಟಾಗುವುದಂತು ಸತ್ಯ.

ನಮ್ಮ ಮುಂದಿನ ಯಾನ ಕಾಳಹಸ್ತಿಯ ಕಡೆಗೆ, ನಮ್ಮ ದೇಶದಲ್ಲಿ ಎರಡು ದೊಡ್ಡ ಧಾರ್ಮಿಕ ಪರಂಪರೆಗಳಿವೆ. ಒಂದು ಶೈವ ಪರಂಪರೆ; ಮತ್ತೊಂದು ವೈಷ್ಣವ ಪರಂಪರೆ. ಈ ಅನ್ವಯ ತಿರುಪತಿಯ ವೈಷ್ಣವ ಪರಂಪರೆಯನ್ನು ಪ್ರತಿನಿಧಿಸಿದರೆ ಪಕ್ಕದಲ್ಲಿರುವ ಕಾಳಹಸ್ತಿ ಶೈವಪರಂಪರೆಯ ಪ್ರತೀಕವಾಗಿದೆ. ಕಾಳಹಸ್ತಿ ಶೈವಕ್ಷೇತ್ರ. ಆ ಬೃಹದ್ದೇವಾಲಯದಲ್ಲಿ ಸ್ಥಾಪಿತವಾಗಿರುವ ಕಾಳಹಸ್ತೇಶ್ವರ ನೂರಾರು ಸ್ಥಾವರ ಲಿಂಗಗಳೂ, ಅಲ್ಲಿಟ್ಟಿರುವ ಅರವತ್ಮೂರು ಮಂದಿ ನಾಯನಾರ್‌ಗಳ ವಿಗ್ರಹಗಳೂ ಇದನ್ನು ಸಾಕ್ಷೀಕರಿಸುತ್ತವೆ. ನಾಲ್ಕಾರು ಎಕರೆಗಳಲ್ಲಿ ಕಟ್ಟಲ್ಪಟ್ಟಿರುವ ಬೃಹದ್ದೇವಾಲಯ. ದೇವಾಲಯದ ವಾಸ್ತುವಂತೂ ಅದ್ಭುತವಾಗಿದೆ. ಆ ದೇವಾಲಯದ ಮಧ್ಯದಲ್ಲೊಂದು ನೆಲಗುಂಡಿಯಿದೆ. ಅದರೊಳಗೆ ನಿಂತು ನೋಡಿದರೆ ಆಗಸದ ಸೂರ್ಯ, ಗರ್ಭಗುಡಿಯ ಗೋಪುರ ಹಾಗೂ ಬೆಟ್ಟದ ಮೇಲಿನ ಕಣ್ಣಂದ(ಕಣ್ಣಪ್ಪ) ಕಣ್ಣಿಟ್ಟ ಶಿವಲಿಂಗ ಇವುಗಳ ದಿವ್ಯದರ್ಶನವಾಗುತ್ತದೆ. ಆ ರೀತಿಯಾದ ಅದ್ಭುತವಾದ ವಾಸ್ತುತಂತ್ರ ಅಳವಡಿಸಲಾಗಿದೆ. ಈ ನೋಟದ ಜೊತೆಗೆ ಹರಿಹರ ಮಹಾಕವಿ ಬರೆದಿರುವ ಬೇಡರಕಣ್ಣಪ್ಪ ರಗಳೆಯನ್ನು ಓದಿದರೆ ಆ ಕ್ಷೇತ್ರದ ಭವ್ಯ ದರ್ಶನವು ಅನಾವರಣಗೊಳ್ಳುತ್ತದೆ.

ನಮ್ಮ ಕೊನೆಯ ಸಂದರ್ಶನ ಸ್ಥಳ ಕಲ್ಕಿ ಭಗವಾನ್‌ರ ಆಧ್ಯಾತ್ಮಿಕ ಕೇಂದ್ರ. ನಮ್ಮ ದೇಶದಲ್ಲಿ ವಿವಿಧ ವಿಷಯವನ್ನು ಕಲಿಸುವ ಸಾವಿರಾರು ವಿದ್ಯಾಕೇಂದ್ರಗಳಿವೆ, ವಿಶ್ವವಿದ್ಯಾನಿಲಯಗಳಿವೆ. ಆದರೆ ಕೇವಲ ಅಧ್ಯಾತ್ಮ ಪದವಿಯನ್ನು ಕೊಡುವ ಅಧ್ಯಾತ್ಮ ವಿದ್ಯಾಲಯಗಳು ವಿಶ್ವವಿದ್ಯಾನಿಲಯಗಳು ತೀರ ಕಡಿಮೆ ಹಾಗೂ ಅಪರೂಪ. ಅಂಥ ಅಪರೂಪದಲ್ಲಿ ಅಪರೂಪದ ಆಧ್ಯಾತ್ಮ ವಿದ್ಯಾಕೇಂದ್ರ ಈ ಕಲ್ಕಿ ಭಗವಾನ್ ಕ್ಷೇತ್ರ. ಇದು ಪ್ರಶಾಂತವಾದ ಹಾಗೂ ವಿಶಾಲ ವಾದ ಜಾಗದಲ್ಲಿ ಸ್ಥಾಪಿತವಾಗಿದೆ. ಇಲ್ಲಿರುವುದು ದೇವಾಲಯುವಲ್ಲ, ಮಂದಿರವಲ್ಲ. ಸ್ವಚ್ಛ ಶ್ವೇತಭವನ, ಅದರೊಳಗೆ ಧ್ಯಾನಮಂಟಪ, ಪ್ರಾರ್ಥನಾ ಮಂದಿರ. ಪರಿ ಪೂರ್ಣವಾಗಿ ಅಮೃತಶಿಲೆಯಿಂದ ನಿರ್ಮಾಣವಾಗಿರುವ ಭವನ ನೋಡಲು ಬಲುಚಂದ. ನಾಲ್ಕು ದಿಕ್ಕುಗಳಲ್ಲಿಯೂ ಸಮಾನಾಕೃತಿಯ ವಾಸ್ತುವನ್ನು ಹೊಂದಿರುವ ಆ ಭವನ ದೂರಕ್ಕೆ ಶಿವನ ಕೈಲಾಸಪರ್ವತದ ಆಕೃತಿಯನ್ನೇ ಹೋಲು ತ್ತದೆ. ನಮ್ಮ ಪ್ರವಾಸ ತಂಡದ ಹರಚರಜಂಗಮಮೂರ್ತಿ ಗಳು ನಮ್ಮೊಡನೆ ಅಂದು ಮಧ್ಯಾಹ್ನ ಆ ಶ್ವೇತ ಭವನದ ಮೇಲೆ ಓಡಾಡುತ್ತಿರುವ ದೃಶ್ಯವಂತೂ ಬೆಳ್ಳಿ ಬೆಟ್ಟದ ಮೇಲೆ ಶಿವಗಣಂಗಳು ಹಾಗೂ ಶಿವನ ಪರಿವಾರದವರು ಓಡಾಡು ತ್ತಿರುವಂತೆ ಭವ್ಯವಾಗಿತ್ತು. ಆ ಪರಿಸರದ ಸ್ವಚ್ಛತೆಯಂತೂ ಮನಂಪುಗುವಂತಿತ್ತು. ಈ ಆಶ್ರಮವು ಜಗತ್ತಿನ ೧೬೦ ರಾಷ್ಟ್ರಗಳಲ್ಲಿ ಭಕ್ತಸಾಧಕರನ್ನು ಹೊಂದಿರುವುದು ವಿಶೇಷ ಸಂಗತಿಯಾಗಿದೆ. ನಮ್ಮ ಪರಮಪೂಜ್ಯರುಗಳಿಗೆ ಹಾಗೂ ನಮಗೆ ಆ ಆಶ್ರಯವಿತ್ತ ಪ್ರೀತ್ಯಾದರಾತಿಥ್ಯಗಳನ್ನು ಯಾವತ್ತೂ ಮರೆಯುವಂತಿಲ್ಲ.

ನಿಮ್ಮಲ್ಲಿ ಕಂಡೆ ಅಣ್ಣ ಬಸವಣ್ಣನ ತತ್ವ
ಸತ್ವಯುತಗೊಂಡು ಸಾಕಾರಗೊಂಡುದ
ನಿಮ್ಮಲ್ಲಿ ಕಂಡೆ ಸಿದ್ಧಪ್ರಭುದ್ಧರ
ಸಂದೇಶ ಗಂಗೆಯೊಲು ಹರಿವುದ
ನಿಮ್ಮಲ್ಲಿ ಕಂಡೆ ದೂರದ ದಿಲ್ಲಿಗೂ
ಬಸವ ಸಂದೇಶ ಮುಟ್ಟಿದುವುದ
ನಿಮ್ಮಲ್ಲಿ ಕಂಡೆ ಹಸಿವ ನೀಗಿಸುವ ಮಂತ್ರ
ಕರುಣಾಯತನನ ಕಾಯಕದ ತಂತ್ರ.

– ಡಾ॥ ಪ್ರಭುಶಂಕರ ಪ್ರೇಮಿ





# ತೀವ್ರರೋಗಗಳಲ್ಲಿ ನಿಸರ್ಗೋಪಚಾರ ನಮಿಸು ನೋವಿಗೆ

– ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

ನಮಿಸು ನೋವಿಗೆ ನೋವು ನಾರಾಯಣ
ನೋವಿನಿಂದ ಪ್ರಾರಂಭ ಸಂಕ್ರಮಣ
ನಿಸರ್ಗಜೀವನದಿಂದ ಸಕಲ ನೋವಿನ ಹರಣ
ಮಿಕ್ಕೆಲ್ಲ ಅಲೆದಾಟವೂ ಬರಿಯ ಚಕ್ರಭ್ರಮಣ

ಮನುಷ್ಯನು ನೋವಿಗೆ ಹೆದರುವಷ್ಟು ಮತ್ಯಾವುದಕ್ಕೂ ಹೆದರುವುದಿಲ್ಲ. ಮಣಿ, ಮಂತ್ರ, ಔಷಧ, ಮಾಯ, ಮಾಟ ಎಲ್ಲಕ್ಕೂ ಪ್ರಾರಂಭವಾದದ್ದು ನೋವನ್ನು ಕಳೆದುಕೊಳ್ಳಲೆಂದೇ. ಬಹುಶಃ ಯಾವುದೇ ನಾಸ್ತಿಕನೂ ಆಗ ಆಸ್ತಿಕನಾಗಿಬಿಡುತ್ತಾನೆ. ಎಂತಹ ಧೈರ್ಯಶಾಲಿಯೂ ಕ್ಷಣಾರ್ಧದಲ್ಲಿ ದೀನನಾಗಿಬಿಡುತ್ತಾನೆ. ಆನೆಗೆ ಅಂಕುಶದಂತೆ ಮನುಜನಿಗೆ ನೋವು! ಜ್ಞಾನವಾಹಿನಿ ನರಗಳ ಮೂಲಕ ನೋವಿನ ಅನುಭವ ಮೆದುಳು ತಲುಪಿ ಅದರ ಅರಿವುಂಟಾಗುತ್ತದೆ. ಮೆದುಳು ಬಳ್ಳಿಯಿಂದ ಹೊರಟ ಜ್ಞಾನವಾಹಿನಿ ಮತ್ತು ಕ್ರಿಯಾವಾಹಿನಿ ನರಗಳ ಒಂದು ಕವಲು ಅವಯವಗಳಿಗೂ, ಮತ್ತೊಂದು ಕವಲು ಚರ್ಮಕ್ಕೂ ಹೋಗಿರುತ್ತದೆ. ಅವಯವಗಳಲ್ಲಿ ಹೆಚ್ಚಿದ ನೋವು, ಆ ಅವಯವಗಳಿಗೆ ಸಂಬಂಧಿಸಿದ ನರಗಳು ಹರಿಯುವ ಚರ್ಮದ ಭಾಗದಲ್ಲಿ ಕಾಣಿಸಿಕೊಳ್ಳುತ್ತದೆ. ಚರ್ಮದ ನೋವಿಗೂ, ಒಳಗಿನ ಅವಯುವಗಳ ನೋವಿಗೂ ವ್ಯತ್ಯಾಸವಿರುತ್ತದೆ. ಸ್ಪರ್ಶ, ಒತ್ತಡ, ಬಿಸಿ– ತಂಪು ಇತ್ಯಾದಿಗಳ ಜ್ಞಾನವನ್ನು ಮಿದುಳು ಚರ್ಮದ ಮೂಲಕ ಪಡೆಯುತ್ತದೆ. ಅವುಗಳ ಪ್ರಚೋದನೆ ಹೆಚ್ಚಾದಾಗ ಆಗುವ ಅನುಭವವೇ ನೋವು. ನೋವು ನೂರು ತರಹ, ಕಾರಣಗಳು ನೂರಾರು ತರಹ.

**ಕಾರಣಗಳು** : ತಲೆನೋವು, ಬೆನ್ನುನೋವು, ಹೊಟ್ಟೆಯ ನೋವು, ಸುಟ್ಟಗಾಯ, ಬಿದ್ದಗಾಯ, ಅಪಘಾತಗಳಿಂದಾದ ನೋವು, ಒಂದೊಂದೂ ಬೇರೆ ಬೇರೆಯ ಕಾರಣದಿಂದ ಬೇರೆ ಬೇರೆಯ ರೀತಿ, ಬೇರೆ ಬೇರೆ ಅಂಗಗಳಲ್ಲಿ ಉಂಟಾಗಿರುತ್ತದೆ. ಅದರ ರೂಪಗಳೂ ಅನೇಕ. ಚುಚ್ಚಿದಂತೆ, ಹಿಂಡಿದಂತೆ, ನುಲಿದಂತೆ, ಮಂದ, ತೀಕ್ಷ್ಣ ಇತ್ಯಾದಿ. ಒಬ್ಬೊಬ್ಬರೂ ತನ್ನ ನೋವನ್ನು ವರ್ಣಿಸುವ ವೈಖರಿಯೇ ಒಂದೊಂದು ಮೋಜು. ಎಲ್ಲರೂ ಆಗ ಕವಿಗಳೇ ಆಗುತ್ತಾರೆಂದರೂ ಸರಿ!

*ನಿಸರ್ಗೋಪಚಾರದ ನಿಲುವು :*

ಶರೀರದ ಒಳಗೆ ಉಳಿಯಲ್ಪಟ್ಟ ಮಲದಿಂದ ಉತ್ಪತ್ತಿಯಾದ ವಿಷವಸ್ತುವು ರಕ್ತಸಂಚಾರವನ್ನು ಕಡಿಮೆ ಮಾಡಿ ಅಲ್ಲಿ ಒತ್ತಡವನ್ನು ಉಂಟುಮಾಡುತ್ತದೆ. ಆ ಹೆಚ್ಚಿನ ಒತ್ತಡದಿಂದ ಆಗುವ ಇಂದ್ರಿಯಾನುಭವವೇ ನೋವು. ನೋವಿಗೆ ನಾನಾ ಕಾರಣಗಳು.

೧. ಕೊಳೆಯ ದೂಡಲು ಹೊರಗೆ ಜೀವಶಕ್ತಿಯ ತಳಮಳವು ಒಳಗೆ ಅದರ ಅನುಭವಕೆ ನಾವು ಕರೆಯುವೆವು ನೋವು

೨. ರಕ್ತದಲಿ ಸೇರಿದ ವಿಷವಸ್ತುಗಳು ಹೆಚ್ಚಿಸುವುವು ಅದರ ಸಾಂದ್ರತೆ ಆಗ ರಕ್ತ ಚಲನೆಗೆ ತಡೆ, ಅದರ ಫಲವೇ ನೋವೆಂಬ ತೀವ್ರತೆ.

೩. ನೋವುಗಳಿಗಿರಬಹುದು ಕಾರಣ ನೂರಾರು ಆಗಿರುವುದೊಂದೇ ಅಲ್ಲಿ ರಕ್ತಸಂಚಲನೆಯ ಏರುಪೇರು

೪. ಶರೀರದಲ್ಲೆಲ್ಲೋ ಏನೋ ಆಗಿದೆ ಕಸಿವಿಸಿ ಅದಕೇ ನೋವೆಂಬ ಈ ಬಿಸಿಬಿಸಿ ಶರೀರದ ಯಾವುದೋ ಒಂದಂಗ ಜಜ್ಜಿರಬಹುದು ಯಾವುದೋ ಒಂದಂಗದ ಮೇಲೆ ಭಾರ ಬಿದ್ದಿರಬಹುದು. ಮತ್ಯಾವುದೋ ಅಂಗವನು ಬೆಂಕಿ ಸುಟ್ಟಿರಬಹುದು ಮತ್ತೊಂದಂಗ ಚಳಿಗೆ ಸಿಲುಕಿರಬಹುದು. ಮಗದೆಲ್ಲೋ ರಾಸಾಯನಿಕ ಅಥವಾ ವಿಷವಸ್ತು ಸೇರಿರಬಹುದು. ಇದೆಲ್ಲದರಲ್ಲೂ ಪರಿಣಾಮ ಮಾತ್ರ ನೋವು ಎಲ್ಲಿ ನೋವೋ ಅಲ್ಲಿಹುದು ಬಾವು–ಕಾವ್ಯ ಓ ನೋವೇ! ನೀನು ಬಹುರೂಪಿ ವಿಶ್ವೇಶ್ವರನಂತೆ ನೀನು ವಿಶ್ವವ್ಯಾಪಿ ನೀ ಭೇಟಿ ಕೂಡದಾ

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.



ತನುವಿಲ್ಲ ನಿನ್ನನರ್ಥಮಾಡಿಕೊಳ್ಳುವ ಶಕ್ತಿ ನಮಗಿಲ್ಲ ನೀನಾದರೋ ಬಾಯ್ಬಿಟ್ಟು ಹೇಳುವುದಿಲ್ಲ ನೀನು ಬರಿಯ ಮೊಂಡ ಇಲ್ಲ ನಿನ್ನಂಥ ಭಂಡ ನೀನೊಬ್ಬ ಬೇಡದ ಅತಿಥಿ ಕರೆಯದೇ ಬರುವೆ ನೀನು ನೋಡದೆ ವಾರ, ತಿಥಿ ಕಚ್ಚು, ಕಿಚ್ಚು, ನುಲಿ ಮುಂತಾದುವು ನಿನ್ನ ವಿವಿಧರೂಪ ಅರ್ಜುನನಿಗಾದರೋ ಪರಮಾತ್ಮನ ವಿಶ್ವರೂಪ ನಮಗೋ ನಿನ್ನ ಈ ವಿವಿಧ ರೂಪ ಕೆಲವರು ಹೇಳುವರು 'ನೀ ನಮ್ಮ ಮಿತ್ರ' ಭಯವಲ್ಲದೆ ಮತ್ತೇನನ್ನೂ ಕಾಣೆವು ನಾವು ನಿನ್ನ ಹತ್ರ ಮತ್ತೆ ಕೆಲವರು ಹೇಳುವರು ನೀ ನಮ್ಮ ಶಿಕ್ಷಕ ನಮಗೆ ತೋರುವುದಷ್ಟೇ ನೀ ನಮ್ಮ ಸಂತಸದ ಭಕ್ಷಕ ಶರೀರದಲ್ಲೆಲ್ಲೋ ಆಗಿದೆ ಆಘಾತವೆಂಬ ಎಚ್ಚರಿಕೆ ಅದು ಕೊಡುತಿರುವ ರೀತಿ ಇದು ಚಚ್ಚರಿಕೆ ನೋವು ಚಿತ್ತಕೆ ಅರಿವಾಗದ ಸ್ಥಿತಿಯೂ ಉಂಟು ಅದೂ ಒಂದು ಬಗೆಯ ರೋಗದಾ ಚಿನ್ಹೆ ಅರಿವಿಗೇ ಬರದೆ ಮುಖ್ಯ ಅಂಗಗಳೇ ಕಟ್ಟಬೇಕಾಗಬಹುದು ಗಂಟು ಅಂದರೆ 'ನೋವು' ಜೀವಿತದ ಅರೋಗ್ಯ ಸಂಜ್ಞೆ ಜೀವವಿರು ವವಗಷ್ಟೇ ನೋವು ಅದರ ಅರಿವಾಗದಿರೆ ಬಂದಂತೆ ಸಾವು ಹೀಗೆ ನೋವಿನ ವಿಶ್ವರೂಪವನ್ನು ನಾವು ಕಾಣ ಬಹುದು. ಮೇಲ್ತೋರಿಕೆಗೆ ನೂರಾರು ಕಾರಣಗಳು. ಕಾರಣ ನಿಸರ್ಗದ ಮಾರ್ಗದಲಿ ತಡೆ. 'ನೋವು ನೋವೆಂದು ನಮ್ಮ ಬೊಮ್ಮಡಿ ನಿಮ್ಮದೋ ಕವನದಾ ದುಡಿ! ಹಾಕಿ ನಿಮ್ಮ ಕವನಕೆ ಬ್ರೇಕು ಸರಳವಾಗಿ ಹೇಳಿ ನೋವಿಗೇನು ಮಾಡಬೇಕು?' ಎಷ್ಟು ಹೊಡೆದರೂ ಇಲ್ಲಪ್ಪ ಬೊಮ್ಮಡಿ ಅದು ದೂರವಾಗಲು ಮಾಡಿಕೋ ನಿಸರ್ಗವನು ನಿನ್ನ ಕನ್ನಡಿ ನೋವನ್ನು ತಡೆಯುವ ಶಕ್ತಿ ಬೇಕು ಅದನು ಅರ್ಥಮಾಡಿ ಕೊಳ್ಳಲು ಯುಕ್ತಿ ಬೇಕು ನೋವು, ನಿಸರ್ಗ ನಮ್ಮನು ತಿದ್ದುತಿರುವಾ ಪರಿ ಅರ್ಥವಾಗದಿರೆ ಬರಿಯ ಪಿರಿಪಿರಿ.

ಈಗ ಈ ಯುಗದಲ್ಲಿ ಪೇನ್ ಕಿಲ್ಲರ್‌ಗಳ ಆಗಮನವಾದ ನಂತರ ನೋವಿನ ಬಗ್ಗೆ ಇಷ್ಟೊಂದು ಬರವಣಿಗೆಯ ಅವಶ್ಯಕತೆಯೇನು? ಈಗ ಒಬ್ಬ ಹುಡುಗನಿಗೆ ಕೊಂಚ ತಲೆನೋವು ಬರಲಿ, ತಕ್ಷಣ ಅವನ ಓಟ ಮೆಡಿಕಲ್ ಶಾಪಿಗೆ, ಒಂದು ಸಣ್ಣ ಮಾತ್ರೆ, ನಿಮಿಷದಲಿ ನೋವು ಮಾಯ.

'ನೋವನ್ನು ಕಡಿಮೆ ಮಾಡಿಕೊಳ್ಳಲು ಔಷಧವನ್ನು ಏಕಪ್ರಕಾರವಾಗಿ ತೆಗೆದುಕೊಂಡಾಗ ಅದು ಅಭ್ಯಾಸವಾಗಿ ಔಷಧ ಸೇವಿಸಿದರೆ ಮಾತ್ರ ನೋವು ಕಡಿಮೆಯಾಗುತ್ತದೆ. ಇಲ್ಲದೇ ಹೋದರೆ ಉಲ್ಬಣಗೊಂಡಂತೆ ಕಾಣುತ್ತದೆ. ಆದುದರಿಂದ ಅಭ್ಯಾಸ ವ್ಯಸನಿಯನ್ನಾಗಿ ಮಾಡುವ ಔಷಧಗಳ ಉಪಯೋಗದಲ್ಲಿ ಸ್ವಲ್ಪ ಜಾಗರೂಕರಾಗಿರುವುದು ಒಳ್ಳೆಯದು'.– ನೋವು, ಡಾ॥ ಎ. ನಾರಾಯಣಪ್ಪ.

ನೋವು ನಿವಾರಕಗಳು ತುರ್ತು ಪರಿಸ್ಥಿತಿಯಲ್ಲಿ, ಅನಿವಾರ್ಯತೆಯಲ್ಲಿ ವರವೇ. ಆದರೆ, ಸಣ್ಣಪುಟ್ಟ ನೋವುಗಳಿಗೆಲ್ಲ ಅವನ್ನು ಬಳಸಿ, ಕಡೆಗೆ ಅವುಗಳ ಪ್ರಭಾವ ಕಡಿಮೆಯಾಗಿ ಮನುಷ್ಯ ಹೆಚ್ಚು ನೋವನ್ನು ಅನುಭವಿಸಬೇಕಾದ ಅನಿವಾರ್ಯತೆಗೆ ಒಳಗಾಗುತ್ತಿದ್ದಾನೆ.

ನೋವಿಗೆ ಔಷಧದಿಂದ ಮೇಲು ಮೇಲಿನ ಪರಿಹಾರ ಮುಂದೆ ಔಷಧವೇ ಆಗುವುದು ನೋವಿಗೆ ಆಹಾರ ನೋವು ನಿವಾರಣೆಗೆ ಸದಾ ರಾಸಾಯನಿಕಗಳ ಬಳಕೆ ಮುಂದೆ ನೋವು ಒಡೆಯುವುದು ಅನೇಕೆ ಮೊಳಕೆ ನೋವು – ನಿಸರ್ಗದಾ ಪಿಸುಮಾತು ಔಷಧಗಳ ಆರ್ಭಟದಲಿ ಹೋಗಿಹುದು ಅದು ಹೂತು ವೈದ್ಯವಿಜ್ಞಾನ ಮುಳುಗು ಹಾಕಿತು ನೋವೆಂಬ ಸಾಗರದಲಿ ಕಡೆಗೆ ಹೆಕ್ಕಿ ತೆಗೆಯಿತು ರತ್ನವನು 'ಪೇನ್ ಕಿಲ್ಲರ್' ರೂಪದಲಿ ಅನಿವಾರ್ಯತೆಯಲಿ ಅದು ಒಂದು ವರ ಸದಾ ಬಳಸೆ ತೆರಲೇಬೇಕು ಖಂಡಿತ ಕರ ಹಳೆಯ ರೋಗಗಳಲ್ಲಿ ಸದಾ ಅದರ ಬಳಕೆ ಬೇಗ ಖಾಲಿಯಾಗುವುದರ ಬತ್ತಳಿಕೆ ಮುಂದೆ ಅದರಿಂದ ಇಲ್ಲ ಯಾವುದೇ ಉಪಯೋಗ ಇದನರ್ಥಮಾಡಿಕೊಳ್ಳಯ್ಯ ಆದಷ್ಟೂ ಬೇಗ Some will use to get rid of pain - Alcohol After some time, except pain - They lose all ಹಳೆಯ ನೋವುಗಳಲಿ ಪೇನ್ ಕಿಲ್ಲರ್ ಕೊಲ್ಲದು ನೋವನು ದಿನೇ ದಿನೇ ಕೊಲ್ಲಲು ಪ್ರಾರಂಭಿಸುವುದು ಶರೀರವನು.

*(ಮುಂದುವರಿಯುತ್ತದೆ.)*

---

ಹೆರವರಿಗೆ ಕಲ್ಯಾಣ ಮಾಡುವುದರಲ್ಲಿ ಮಗ್ನರಾದ ಸಜ್ಜನರು ಯಾರೊಡನೆಯೂ ದ್ವೇಷ ಕಟ್ಟಿಕೊಳ್ಳುವುದಿಲ್ಲ. ಚಂದನ ಗಿಡವನ್ನು ಕೊಡಲಿಯು ಕಡಿದರೂ ಅದು ಕೊಡಲಿಯ ಮೇಲೆ ಸಿಟ್ಟು ಮಾಡದೆ ಅದರ ಮುಖವನ್ನೇ ಸುಗಂಧಮಯವಾಗಿ ಮಾಡುವುದು.

– ಭರ್ತೃಹರಿ

---







# ಶ್ವಾಸಗತಿ

– ಸದಾಶಿವಯೋಗಿ *

'ಯಃ ಪ್ರಾಣಃ ಪವನಃ ಸ್ಪಂದಃ ಚಿತ್ತಃ ಸ್ಪಂದಃ ಏವಹಿ।' ಅಂತರಾತ್ಮ ಶಕ್ತಿಯಾದ ಪ್ರಾಣವಾಯುವಿನ ಸ್ಪಂದನವೇ ಸರ್ವಜೀವಿಗಳ ಚಿತ್ತಸ್ಪಂದನಕ್ಕೆ ಕಾರಣವಾಗಿದೆ. ಹೀಗೆ ಚಿತ್ತವು ಚಲಿಸುತ್ತಿರುವುದರಿಂದಲೇ ಅದರಿಂದುಂಟಾದ ನಾನು ಎಂಬ ಮನಸ್ಸು ಲೋಕಾಭಿಮುಖಾಅಗಿ ಚಲಿಸಿ ತನಗನುಕೂಲವಾದಂತೆ ಲೋಕವನ್ನು ಸೃಷ್ಟಿಸಿಕೊಂಡು ಇಂದ್ರಿಯದ್ವಾರ ವ್ಯವಹರಿಸುತ್ತದೆ. ಇದು ಮನಸ್ಸಿನ ಪ್ರವೃತ್ತಿ ಧರ್ಮ ಅರ್ಥಾತ್ ಬಹಿರ್ಮುಖ ಪ್ರಜ್ಞೆ, ಹೀಗೆ ಅಧೋಮುಖವಾದ ಶ್ವಾಸಗತಿಯು ತನ್ನ ಅಂತರಂಗದ ಊರ್ಧ್ವಮುಖಕ್ಕೇರಿ, ಅಂತರ್ ಮುಖವಾದರೆ ಮನಸ್ಸಿಗೆ ನಿವೃತ್ತಿಗುಣಗಳು ಉಂಟಾಗುತ್ತವೆ. ಯಾವಾಗಲೂ ಒಬ್ಬ ವ್ಯಕ್ತಿಯಲ್ಲಿ ಒಂದೇ ರೀತಿಯ ಗುಣಗಳು ಶಾಶ್ವತವಾಗಿ ಇರುವುದಿಲ್ಲ. ಸಮಯ ಸಂದರ್ಭಕ್ಕನುಗುಣವಾಗಿ ಕ್ಷಣಕ್ಷಣಕ್ಕೂ ಬದಲಾವಣೆ ಹೊಂದುತ್ತಲೇ ಇರುತ್ತದೆ. ಇದಕ್ಕೆ ಅವನ ಮನಸ್ಸೇ ಕಾರಣ, ಮನಸ್ಸಿಗನುಗುಣವಾಗಿ ಅವನವನ ಉಸಿರಾಟದ ಗತಿಯು ವ್ಯವಸ್ಥಿತವಾಗಿ ನಡೆಯುತ್ತಿರುತ್ತದೆ.

ನಮ್ಮಲ್ಲಿ ಅರಿಷಡ್ವರ್ಗಗಳೆಂಬ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಜೀವಿಯ ಜೀವನಕ್ಕೆ ಶತೃಗಳೇ ಆದ ಹಾಗೂ ಮನುಷ್ಯನ ಸುಖ ಶಾಂತಿಗಳಿಗೆ ಆತಂತಕಾರಿಗಳಾಗಿರುತ್ತವೆ. ಇವು ಪ್ರತಿಯೊಬ್ಬರ ಮನಃಪ್ರೇರಣೆಯಿಂದಲೇ ಹುಟ್ಟುತ್ತವೆ. ಸಾಮಾನ್ಯವಾಗಿ ಇವು ಯಾವ ಜೀವಿಯಲ್ಲಿಯೂ ಯಾವಾಗಲೂ ಇರಲು ಸಾಧ್ಯವಿಲ್ಲ. ಸಮಯ ಸಂದರ್ಭಕ್ಕನುಗುಣವಾಗಿ ಕೆರಳಿದ ಮನಸ್ಸಿನ ಅಂತರಂಗದ ರಾಸಾಯನಿಕ ಕ್ರಿಯೆಯಿಂದ ಪ್ರಕಟವಾಗಿ ತಮ್ಮ ತಮ್ಮ ವೃತ್ತಿ ಧರ್ಮಕ್ಕನುಗುಣವಾಗಿ ಪ್ರತಿ ಜೀವಿಯ ಶ್ವಾಸೋಛ್ವಾಸ ದ್ವಾರ ಶರೀರದ ಮೂಲಕ ಪ್ರಕಟವಾಗುತ್ತಿರುತ್ತವೆ.

ಕೋಪವಿದ್ದಾಗ ಇರುವ ಶ್ವಾಸಗತಿಯೇ ಬೇರೆ, ಕಾಮಿಯ ಶ್ವಾಸಗತಿಯೇ ಬೇರೆ. ಹಾಗೆಯೇ ಕ್ರೋಧಿಯ, ಲೋಭಿಯ, ಮೋಹಿಯ ಮದಿಸಿದವನ ಹಾಗೂ ಮಾತ್ಸರ್ಯ ಉಳ್ಳವನ ಉಸಿರಾಟದ ಗತಿಯೇ ಬೇರೆ ಬೇರೆಯಾಗಿರುತ್ತದೆ. ಇದೇ ವಿಧ ನಿದ್ರಿಸುವವನ ಉಸಿರಾಟದ ಗತಿಯೇ ಬೇರಾದರೆ, ಎಚ್ಚರ ಉಳ್ಳಾನ ಉಸಿರಾಟದ ಗತಿಯು ಬೇರೆಯಾಗಿರುತ್ತದೆ. ಸಮಚಿತ್ತದಲ್ಲಿ ಉಸಿರಾಟದ ಗತಿ ಬೇರೆಯಾದರೆ ಆಲೋಚನಾಪರನಲ್ಲಿ ನಡೆಯುವ ಉಸಿರಾಟವೇ ಬೇರೆ. ಜ್ಞಾನಿಯ ಗತಿ ಅಂತರ್‌ಮುಖ ವಾಗಿದ್ದರೆ ಮೂರ್ಖನ ಗತಿ ಹೊರಮುಖವಾಗಿರುತ್ತದೆ. ಉದ್ವಿಗ್ನನಲ್ಲಿ ಒಂದು ವಿಧದ ಉಸಿರಾಟವಾದರೆ ದುಃಖ ತಪ್ತನಲ್ಲಿನ ಉಸಿರಾಟದ ಗತಿಯೇ ಬೇರೆಯಾಗಿರುತ್ತದೆ. ಹಾಗೆಯೇ ಆವೇಶಭರಿತನಲ್ಲಿನ ಉಸಿರಾಟದ ಗತಿಯೇ ಬೇರೆಯಾಗಿರುತ್ತದೆ. ಈ ಅವಸ್ಥೆಗಳಲ್ಲಿ ಆಯಾ ಸಂದರ್ಭಕ್ಕೆ ತಕ್ಕಂತೆ ಮನಸ್ಸಿನ ತರಂಗಗಳಿಗನುಸಾರವಾಗಿ ಅಂತರಂಗದಲ್ಲಿ ರಾಸಾಯನಿಕ ಕ್ರಿಯೆ ನಡೆದು ಆ ಸಂದರ್ಭಕ್ಕೆ ತಕ್ಕಂತೆ ಶ್ವಾಸಗತಿಯು ಕ್ಷಣಕ್ಷಣಕ್ಕೂ ಶ್ವಾಸಗತಿಯು ಬದಲಾಗುತ್ತಿರುತ್ತದೆ.

ಪ್ರತಿಜೀವಿಯ ಜೀವನದ ಉಸಿರಾಟವು ಗಾಳಿಯ ತಿದಿಯನ್ನೊತ್ತಿದ ಒಂದು ಹಾರ್ಮೋನಿಯಂನಂತೆ ಯಾವ ರೀಡ್ ಮೇಲೆ ಬೆರಳನ್ನು ಒತ್ತುತ್ತೇವೆಯೋ ಆಯಾ ರೀಡಿಗನುಗುಣವಾಗಿ ನಾದವು ಹೊರಹೊಮ್ಮುವುದೋ ಅದೇ ರೀತಿ ನಮ್ಮ ಜೀವನದ ಶ್ವಾಸಗತಿಯ ತಿದಿಯ ದ್ವಾರ ಮನಸ್ಸಂಕಲ್ಪವೆಂಬ ರೀಡ್ಸ್‌ನಲ್ಲಿ ತನ್ಮಯವಾದಾಗ ಆ ಶರೀರದಿಂದ ಅದಕ್ಕನುಗುಣವಾದ ಭಾವತರಂಗಗಳ ಮೂಲಕ ಭಾವನೆಗಳು ಉದ್ಭವವಾಗುತ್ತವೆ.

ಒಬ್ಬ ವ್ಯಕ್ತಿಯು ಅತಿಯಾದ ಕೋಪದಿಂದ ವರ್ತಿಸುತ್ತಿರುತ್ತಾನೆ. ಆ ವೇಳೆಯಲ್ಲಿ ಆತನ ಶ್ವಾಸೋಛ್ವಾಸದ ಏರಿಳಿತಗಳು ಆವೇಶಭರಿತವಾಗಿರುತ್ತವೆ. ಅದೇ ಸಂದರ್ಭದಲ್ಲಿ ಆತನ ಗುರುವು ಬಂದದ್ದೇ ಆದರೆ ಅವರನ್ನು ನೋಡಿದ ಕೂಡಲೇ ಆತನ ಅಂತರಂಗದಲ್ಲಿ ಮತ್ತೊಂದು ವಿಧ ರಾಸಾಯನಿಕ ಕ್ರಿಯೆ ನಡೆದು ತನ್ನ ಉಸಿರಾಟದ ಗತಿಯನ್ನು ಬದಲಾಯಿಸಿಕೊಂಡು ತನ್ನ ಗುರುಗಳನ್ನು ಗೌರವದಿಂದ ಸ್ವಾಗತಿಸುತ್ತಾನೆ. ಆ ಸಂದರ್ಭದಲ್ಲಿ ಆತನ ಉಸಿರಾಟದ ಗತಿ ಬೇರೆಯಾಗಿರುತ್ತದೆ. ಅಂದಾಗ ಯಾವ ಕಾರಣಕ್ಕೂ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅವನಿಗೆ ಮೊದಲಿನ ಆವೇಶದ ಉಸಿರಾಟದ ಗತಿ ಬರಲಾರದು. ಕಾರಣ ಆ ಸಂದರ್ಭ ಬದಲಾಗಿರುತ್ತದೆ. ಅವನು ಬುದ್ಧಿ ಪೂರಕವಾಗಿ ಪ್ರಯತ್ನಿಸಿದರೂ ಆವೇಶದ ಉಸಿರಾಟದ ಗತಿಯನ್ನು ತಂದುಕೊಳ್ಳಲು ಸಾಧ್ಯವಿಲ್ಲ.

ಒಬ್ಬ ವ್ಯಕ್ತಿಯು ಅತಿಯಾದ ದುಃಖಿತಪ್ತನಾಗಿದ್ದಾಗ ಆತನ ಸ್ನೇಹಿತರು ಅನೇಕ ರೀತಿಯಲ್ಲಿ ಸಮಾಧಾನ ಹೇಳುವುದರ ಮೂಲಕ ಅಂದರೆ ಕಥೆ, ಪುರಾಣ, ಇತ್ಯಾದಿಗಳನ್ನು ಹೇಳಿ ಆತನ ಮನಸ್ಸನ್ನು ಬೇರೆಡೆಗೆ ತಿರುಗಿಸುತ್ತಾರೆ. ಆ ಸಂದರ್ಭದಲ್ಲಿ ಈ ಮೊದಲು ದುಃಖದಲ್ಲಿ ಮಗ್ನನಾಗಿದ್ದ ಮನುಷ್ಯನು ಕಥೆ ಕೇಳುವುದರ ಮೂಲಕ ತನಗರಿವಿಲ್ಲದಂತೆ ದುಃಖದ ಉಸಿರಾಟದ ಮಾರ್ಗದಿಂದ ಮತ್ತೊಂದು ಉಸಿರಾಟದ ಗತಿಗೆ ಮಾರ್ಪಡುತ್ತಾನೆ. ಅಂದರೆ ಆತನಲ್ಲಿ ದುಃಖದ ಉಸಿರಾಟದ ಗತಿ ಬೇರೆಯಾಗಿದ್ದರೆ ಈಗಿನ ಉಸಿರಾಟದ ಗತಿಯೇ ಗತಿಗೆ ಮಾರ್ಪಡುತ್ತಾನೆ. ಅಂದರೆ ಆತನಲ್ಲಿ ದುಃಖದ ಉಸಿರಾಟದ ಗತಿ ಬೇರೆಯಾಗಿದ್ದರೆ ಈಗಿನ ಸಮಾಧಾನದ ಉಸಿರಾಟದ ಗತಿಯೇ ಬೇರೆಯಾಗಿರುತ್ತದೆ. ದುಃಖದ ಉಸಿರಾಟದ ತೀವ್ರತೆ ಅವನು ಸಮಾಧಾನದಲ್ಲಿದ್ದಾಗ ಮೊದಲಿನ ಉಸಿರಾಟದ ಗತಿ ಮರುಕಳಿಸಲು ಸಾಧ್ಯವಿಲ್ಲ.

ಇದೇ ವಿಧ ಒಬ್ಬ ವ್ಯಕ್ತಿಯು ಬಹಳ ಸಂತೋಷದಲ್ಲಿದ್ದಾಗ ಕೂಡಲೇ ಅವನಿಗೆ ಆಘಾತಕರವಾದ ವಿಷಯವನ್ನು ತಿಳಿಸಿದ್ದೇ ಆದರೆ ಕೂಡಲೇ ಅವನ ಮನಸ್ಸಿನ ದ್ವಾರ ಈ ವಿಚಾರ ತಿಳಿದ ಅವನ ಅಂತರಂಗದಲ್ಲಿ ರಾಸಾಯನಿಕ ಕ್ರಿಯೆ ನಡೆದು ಅವನಲ್ಲಿ ಈ ಮೊದಲಿದ್ದ ಆನಂದದ ಉಸಿರಾಟವು ಕ್ಷಣಮಾತ್ರದಲ್ಲಿ ಮಾಯವಾಗಿ, ಈಗ ಅವನಿಗೆ ಆತಂಕದ ಉಸಿರಾಟವು ಉಂಟಾಗಿ ಅದು ಅವನ ಶರೀರದ ಮೇಲೆ ಪರಿಣಾಮ ಉಂಟುಮಾಡುತ್ತದೆ. ಇದು ಆಯಾ ಸಂದರ್ಭಕ್ಕನುಗುಣವಾದ ಮನೋಪ್ರೇರಣೆ ಗನುಗುಣವಾಗಿ ನಡೆಯುವ ಶ್ವಾಸ ಕ್ರಿಯೆಯೇ ಆಗಿರುತ್ತದೆ. ಒಬ್ಬ ವ್ಯಕ್ತಿಯ ಮುಂದೆ ತನಗೆ ಆಗದ ಶತ್ರು ಎದುರಾದ ಪಕ್ಷದಲ್ಲಿ ಅವನು ಆ ಶತ್ರುವಿನ ಬಗ್ಗೆ ಆಲೋಚಿಸುವುದರಿಂದ ಅವನ ಅಂತರಂಗದಲ್ಲಿ ನಡೆಯುವ ರಾಸಾಯನಿಕ ಕ್ರಿಯೆ ಯಿಂದ ಅವನ ಶ್ವಾಸಗತಿಯು ಮೊದಲಿಗಿಂತ ಬೇರೆ ಯಾಗಿರುತ್ತದೆ. ಇದೇ ವಿಧ ಕಾಮುಕನಾದ ಒಬ್ಬ ವ್ಯಕ್ತಿಯ ಮುಂದೆ ಸುಂದರಿ ಸ್ತ್ರೀಯೋರ್ವಳು ಎದುರಾದರೆ ಅವನ ಮನಸ್ಸಿನಲ್ಲಿ ಉಂಟಾಗುವ ಕಾಮವಿಕಾರದಿಂದ ಅವನ ಶರೀರದಲ್ಲಿ ನಡೆಯುವ ರಾಸಾಯನಿಕ ಕ್ರಿಯೆಯಿಂದ ಅವನ ಉಸಿರಾಟವೇ ಬೇರೆಯಾಗಿರುತ್ತದೆ. ಬಿಸಿಲಿನ ಝಳದಿಂದ ಬಳಲಿದ ಒಬ್ಬ ವ್ಯಕ್ತಿ ಒಂದು ವೃಕ್ಷದ ಕೆಳಕ್ಕೆ ಹೋದಾಗ ಅವನ ಅಂತರಾಳದಲ್ಲಿ ನಡೆಯುವ ಒಂದು ರಾಸಾಯನಿಕ ಕ್ರಿಯೆಯಿಂದ ಅವನಿಗೆ 'ಹಾಯ್' ಎನಿಸುವ ಶ್ವಾಸಗತಿಯುಂಟಾಗುತ್ತದೆ.

ಮಲಗಿ ನಿದ್ರಿಸುವವನೊಬ್ಬನ ಮುಂದೆ ಅವನ ಶತ್ರು ಬಂದಾಗ ಅಥವಾ ಅವನ ಮೈಮೇಲೆ ಹಾವು ಹರಿದಾಡಿದರೂ ಅಥವಾ ಅವನ ಪಕ್ಕದಲ್ಲಿ ನಿಂತು ಸುಖದುಃಖ ವಿಚಾರಗಳನ್ನು ಮಾತನಾಡಿಕೊಂಡಾಗ, ಅವನು ಇವುಗಳಾವುದಕ್ಕೂ ಪ್ರತಿಕ್ರಿಯಿಸದಿರುವುದರಿಂದ ಅವನ ಮನಸ್ಸು ಸುಪ್ತಾವಸ್ಥೆಯಲ್ಲಿ ಅಡಗಿರುತ್ತದೆ. ಆದ್ದರಿಂದ ಹೊರಗಿನ ಯಾವ ವಿಚಾರ ತರಂಗಗಳು ಅವನ ಮನಸ್ಸಿನ ಮೇಲೆ ಪರಿಣಾಮವಾಗುವುದಿಲ್ಲ. ಆದ್ದರಿಂದಲೇ ನಿದ್ರಿಸುವವರೆಲ್ಲರ ಉಸಿರಾಟದ ಗತಿ ಒಂದೇ ಆಗಿರುತ್ತದೆ. ಆದರೆ ಹೀಗೆ ನಿದ್ರಿಸುವ ವ್ಯಕ್ತಿಯು ಕನಸು ಕಂಡಾಗ ಆಯಾ ಕನಸುಗಳಿಗನುಗುಣವಾಗಿ ಅವನ ಶ್ವಾಸಗತಿಯ ಏರುಪೇರುಗಳು ನಡೆಯುತ್ತವೆ.

ಈ ವಿಧ ಅವರವರ ನಿದ್ರಾಸ್ಥಿತಿಯಲ್ಲಿ ಸಮಸ್ತರೂ ಅಂದರೆ, ರಾಜ, ರಾಣಿ, ಬಡವ-ಬಲ್ಲಿದ ಇವರೆಲ್ಲರೂ ಒಂದೇ ತೆರನಾದ ಉಸಿರಾಟದಲ್ಲಿ ಇರುತ್ತಾರೆಯೇ ವಿನಃ ಇಲ್ಲಿ ರಾಜನದೇ ಬೇರೆ, ರಾಣಿಯದೇ ಬೇರೆ, ದರಿದ್ರನದೇ ಬೇರೆ ಎಂಬ ಭಿನ್ನ ಬೇಧದ ಉಸಿರಾಟವಿರುವುದಿಲ್ಲ. ಸುಪ್ಪತ್ತಿಗೆಯ ಮೇಲೆ ಮಲಗಿದ ರಾಜನಿಗೂ, ಗುಡಿಸಲಿನ ಚಾಪೆಯ ಮೇಲೆ ಮಲಗಿದ ಬಡವನಿಗೂ ನಿದ್ರಾಸುಖ ಒಂದೇ ಆಗಿರುತ್ತದೆ. ಇದೇ, ಪ್ರಕೃತಿಯು ಎಲ್ಲಾ ಜೀವಿಗಳ ಮೇಲೆ ಇಟ್ಟಿರುವ ಸಮಾನದೃಷ್ಟಿ ಕ್ರೋಧದಲ್ಲಿರುವ ಪ್ರತಿ ಯೊಬ್ಬರ ಉಸಿರಾಟದ ಗತಿ ಒಂದೇ ಆಗಿರುತ್ತದೆ. ಇದೇ ವಿಧ ಸರ್ವರಲ್ಲಿ ಅಡಗಿರುವ ಗುಣಗಳು ಆಯಾ ಸಂದರ್ಭ ಕ್ಕನುಗುಣವಾಗಿ ಅವರವರಲ್ಲಿ ಪ್ರಕಟವಾದಾಗ ಆಯಾ ಗುಣಕ್ಕನುಗುಣವಾಗಿ ಅವರೆಲ್ಲರೂ ಒಂದೇ ವಿಧ ಉಸಿರಾಟ ದಲ್ಲಿ ಮಗ್ನರಾಗಿರುತ್ತಾರೆ. ಇದು ಪ್ರಕೃತಿಯ ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಸಮಾನವಾಗಿ ಬೀಸಿರುವ ಮಾಯಾಜಾಲ.

ಮನುಷ್ಯ ತನ್ನ ಬದುಕಿನಲ್ಲಿ ಸುಖಶಾಂತಿ ಹೊಂದಬೇಕು. ಅರಿಷಡ್ವರ್ಗಗಳಿಂದ ಪಾರಾಗಬೇಕು ಅಂದರೆ ಕಾಣದ





ಇಂದ್ರಿಯಗಳನ್ನು ಜಯಿಸುವುದು ಅಥವಾ ಮನಸ್ಸನ್ನು ಜಯಿಸುವುದು ಎಂದು ಅರ್ಥವಲ್ಲ. ತಾನು ಏಕಾಗ್ರಚಿತ್ತನಾಗಿ ತನ್ನಲ್ಲೇ ನಡೆಯುತ್ತಿರುವ ಶ್ವಾಸೋಛ್ವಾಸ ಕ್ರಿಯಾಮೂಲವನ್ನು ಅರ್ಥಮಾಡಿಕೊಂಡು ಯಾವ ಉಸಿರಾಟದಿಂದ ತನಗೆ ಶಾಂತಿ ಲಭಿಸುತ್ತಿದೆಯೋ, ಯಾವ ಉಸಿರಾಟದ ವೇಳೆ ತನಗೆ ಜ್ಞಾನೋದಯವಾಗುತ್ತದೆಯೋ ಅಂತಹ ಪವಿತ್ರ ಉಸಿರಿನ ಗತಿಯನ್ನು ತಾನು ಅರಿಯಲು ಯತಿಗಳು ಕಂಡುಹಿಡಿದ ಉಪಾಯ ಮಾರ್ಗವೇ ಆದ ಯೋಗ ಸೂತ್ರದ್ವಾರ ತನ್ನ ಅಂತರಂಗದ ನೆಲೆಯನ್ನು ತಾನು ತಾನೇ ಆಗಿ ಅರಿಯುವುದೇ ಆಗಿದೆ.

*ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।*
*ಪ್ರಾಣಾಪಾನಗತೀರುದ್ಧ್ವಾ ಪ್ರಾಣಾಯಾಮ ಪರಾಯಣಾಃ ॥*

ಲೋಕಜೀವಿಗಳಲ್ಲಿ ಪ್ರಾಣವು ಅಪಾನವನ್ನೂ ಅಪಾನವು ಪ್ರಾಣವನ್ನೂ ಆಕರ್ಷಿಸುವ ಕ್ರಿಯೆಯು ತನಗೆ ಅರಿವಿಲ್ಲದಂತೆ ಯಂತ್ರದೋಪಾದಿಯಲ್ಲಿ ಜೀವನ ಪರ್ಯಂತ ನಡಿಯುತ್ತಿರುವುದೇ ಈ ಲೋಕ ಜೀವನದ ಜೀವಿಗಳ ಬದುಕಾಗಿರುತ್ತದೆ. ಈ ವಿಧ ತನ್ನಲ್ಲಿ ವಿಭಿನ್ನ ರೀತಿಯಲ್ಲಿ ನಡೆಯುತ್ತಿರುವ ಪ್ರಾಣಾಪಾನವೆಂಬ ಎರಡೂ ಗತಿಗಳನ್ನೂ ತನ್ನಂತರಂಗದಲ್ಲಿ ಒಂದಾಗಿಸಿ ಮೂಲಪ್ರಾಣನಲ್ಲಿ ಲಯಿಸಿನಿಂತ ಪ್ರಜ್ಞಾವಂತ ಮಹಾನುಭಾವನಿಗೆ, ಬಹಿರ್ಗತ ಇಚ್ಛಾ, ಭಯ, ಕ್ರೋಧ, ತಾಪಗಳೇನೂ ಇಲ್ಲದೆ ನಿರ್ಮಲನಾಗಿ ಉಳಿಯುತ್ತಾನೆ. ಇದೇ ಇಂದ್ರಿಯ ನಿಗ್ರಹದ ಮರ್ಮ. ಇದುವೇ ಮನುಷ್ಯನ ನಿವೃತ್ತಿ ಧರ್ಮ.

ದುಃಖದಲ್ಲಿದ್ದವನ ಮನಸ್ಸು ಭಾರವಾಗಿ ಕಣ್ಣಿನ ದೃಷ್ಟಿ ಕೆಳಮುಖವಾಗಿ ಬಿಸಿಯಿಂದ ಕೂಡಿದ ಕಣ್ಣೀರು ಬಂದು ಶ್ವಾಸವು ಸ್ಥೂಲವಾಗಿ ಅಧೋಮುಖವಾಗಿ ಇರುತ್ತದೆ. ಕೆಟ್ಟ ಆಲೋಚನೆ ಮಾಡುವವನ ದೃಷ್ಟಿಸಂಕುಚಿತವಾಗಿ ಶ್ವಾಸವು ಹೊರಮುಖವಾಗಿರುತ್ತದೆ. ಆದರೆ ಉತ್ತಮ ಆಲೋಚನೆ ಮಾಡುವಾಗ ದೃಷ್ಟಿ ಮೇಲ್ಮುಖವಾಗಿ ಶ್ವಾಸವು ಊರ್ಧ್ವಗತಿಯಲ್ಲಿಯೂ ಮನಸ್ಸು ಅದರಲ್ಲಿ ಲೀನವಾಗಿರುತ್ತದೆ. ಹೀಗೆ ನಮ್ಮ ಆಲೋಚನೆಗಳಿಗನುಗುಣವಾಗಿ ಶ್ವಾಸಗತಿಯು ಮನಸ್ಸಿಗನುಗುಣವಾಗಿ ಚಲಿಸುತ್ತದೆ. ಶ್ವಾಸವನ್ನು ಅನುಸರಿಸಿ ಮನಸ್ಸು ಮತ್ತು ದೃಷ್ಟಿ ಸಹಚರವಾಗಿತ್ತವೆ. ಶ್ವಾಸಕ್ರಿಯಾ ಮರ್ಮವನ್ನು ಅರಿತವನು ಪ್ರಾಜ್ಞನಾಗಿರುತ್ತಾನೆ. ಸಮಸ್ತ ಜೀವಿಗಳಲ್ಲಿ ಶ್ವಾಸೋಛ್ವಾಸ ಕ್ರಿಯೆ ಪ್ರಕೃತಿ ಸಹಜವಾಗಿ ಏರುಪೇರಿಲ್ಲದೆ ಸಮಾನವಾಗಿ ನಡೆಯುತ್ತಿರುತ್ತದೆ. ಆದರೂ ಪ್ರತಿವ್ಯಕ್ತಿಯ ಮನಸ್ಸಿನ ಆವೇಶ, ಉದ್ವೇಗ, ಆಲೋಚನೆ, ದಣಿವು, ದುಗುಡ, ದುಃಖ, ದುಃಮಾನ, ದುರಭಿಮಾನಗಳಿಗನುಗುಣವಾಗಿ ವೈಯಕ್ತಿಕವಾಗಿ ಪ್ರತಿಯೊಬ್ಬರಲ್ಲಿಯೂ ಆಯಾಯ ಸಂದರ್ಭಕ್ಕನುಗುಣವಾಗಿ ಕ್ಷಣಕ್ಷಣಕ್ಕೂ ಅವರವರ ಶ್ವಾಸಗತಿಯು ಬದಲಾವಣೆ ಹೊಂದುತ್ತಿರುತ್ತದೆ. ಆದ್ದರಿಂದ ಸಮಸ್ತ ಜೀವಿಗಳು ಮೂಲತಃ ಹುಟ್ಟಿದ್ದೂ ಪ್ರಾಣನಿಂದ, ಬದುಕುತ್ತಿರುವುದೂ ಈ ಪ್ರಾಣನಿಂದ, ಅಂತಹ ಈ ಪ್ರಾಣ ಬಿಟ್ಟು ಹೋದ ತಕ್ಷಣ ಜಡವಾಗುತ್ತಾನೆ. ಅಂದರೆ ಸಮಸ್ತ ಜೀವರಾಶಿಗಳ ಸೃಷ್ಟಿ-ಸ್ಥಿತಿ-ಲಯ ಈ ಮೂರಕ್ಕೂ ಮೂಲತಃ ಕಾರಣ ಈ ಪ್ರಾಣವಾಯುವೇ ಆಗಿರುತ್ತದೆ. ಈ ಪ್ರಾಣವಾಯು ಜಗತ್ತಿನ ಸಮಸ್ತ ವಸ್ತುಗಳನ್ನು ಮಾಲೆಯೊಳಗಿನ ಸೂತ್ರದಂತೆ ಎಲ್ಲವನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿದೆ. ಈ ಮೂಲಪ್ರಕೃತಿಗೆ ಯಾರಲ್ಲಿಯೂ ಬೇಧವಿಲ್ಲ. ಈ ಬೇಧವು ಜೀವಿಯು ತನ್ನ ತಾನು ತನ್ನದೆಂಬ ಅಹಂನಿಂದ ಸೃಷ್ಟಿಸಿಕೊಳ್ಳುತ್ತಿರುವುದೇ ಆಗಿದೆ. ಈ ಪ್ರಕೃತಿಯ ಸರಳ ಸತ್ಯವನ್ನು ಅರ್ಥಮಾಡಿಕೊಳ್ಳದೆ, ಮೌಢ್ಯದಿಂದ ತಾನು ಮಾಡಬಾರದ್ದನ್ನು ಮಾಡಿ, ಅದರಿಂದ ಆಗಬಾರದ ಅನಾಹುತವಾದಾಗ ಆ ಕಷ್ಟವನ್ನು ಅನುಭವಿಸಲಾರದೆ 'ಭವಬಂಧ ಬಿಡಿಸಯ್ಯ ಗುರುವೇ ಹೇ ದೇವಾ' ಎಂದು ಆಲಾಪನೆಗೈಯುತ್ತಾರೆ. ಇವರಿಗೆ ಭಾವನೆಯು ಹುಟ್ಟಿದ್ದು ತನ್ನಿಂದಲೇ, ಅದರಿಂದ ಬಂಧನಕ್ಕೊಳಗಾಗಿರುವವನೂ ತಾನೆ, ಹೀಗೆ ಬಂಧಿಸಲ್ಪಟ್ಟ ತಾನು ಆ ಬಂಧನದಿಂದ ಬಿಡಿಸಿಕೊಳ್ಳುವ ಮಾರ್ಗವನ್ನು ತಾನು ತನ್ನಲ್ಲಿಯೇ ಹುಡುಕಿ ಕೊಳ್ಳಬೇಕಲ್ಲದೆ, ಹೇ ಗುರುದೇವಾ, ಶಿವ-ಶಿವಾ, ವೆಂಕಟ ರಮಣ, ರಾಮ-ರಾಮ ಎಂದು ಆಲಾಪನೆ ಮಾಡುತ್ತಾ ಕುಳಿತರೆ ಇವರ್ಯಾರೂ ಬಂದು, ಇವರನ್ನು ಭವ ಬಂಧನ ದಿಂದ ಮುಕ್ತಗೊಳಿಸಲಾರರು.

ಪ್ರಯಾಣಿಕನೊಬ್ಬನು ಅರಣ್ಯದ ಮಾರ್ಗದಲ್ಲಿ ಹೋಗುತ್ತಿದ್ದಾಗ ಗುಡುಗು ಸಿಡಿಲಿನಿಂದ ಕೂಡಿದ ಜೋರಾದ ಮಳೆ ಆರಂಭವಾಗುತ್ತದೆ. ಆಗ ಆತನು ಅಲ್ಲಿಯೇ ಪಕ್ಕದಲ್ಲಿ ಕಾಣುತ್ತಿದ್ದ ಗುಹೆಯೊಂದನ್ನು ಹೊಕ್ಕು ಆಶ್ರಯ ಪಡೆಯುತ್ತಾನೆ. ಹೀಗೆ ಆಶ್ರಯ ಪಡೆಯುತ್ತಿದ್ದ ಆತನಿಗೆ ಹೊರಗಿನ ಮಳೆಯ ಶಬ್ದದಲ್ಲಿ ನಿದ್ರೆಯ ಜೊಂಪು ಹತ್ತುತ್ತದೆ. ಆ ನಿದ್ರೆಯಲ್ಲಿ ಆತ ಕನಸೊಂದನ್ನು ಕಾಣುತ್ತಾನೆ. ಆ ಕನಸಿನಲ್ಲಿ ಆತನ ಶರೀರವು ಭಾರಿ ಬೆಳೆದಂತೆಯೂ ಆತನಿಗೆ ಭಯಂಕರವಾದ ಕೋಡುಗಳು

ಮೂಡಿದಂತೆಯೂ ಬಾಹುಗಳು ಉದ್ದವಾಗಿ ಬೆಳೆದಂತೆಯೂ ಕನಸು ಬೀಳುತ್ತದೆ. ಈ ಕನಸಿನ ಭಯದಿಂದ ಆತನಿಗೆ ಎಚ್ಚರವಾಗುತ್ತದೆ. ಆಗ ಹೊರಗೆ ಮಳೆನಿಂತು ವಾತಾವರಣ ನಿಚ್ಚಳ ವಾಗಿರುತ್ತದೆ. ತನ್ನ ಕನಸಿನ ಭ್ರಮೆಯಲ್ಲಿಯೇ ಇದ್ದ ಆತನಿಗೆ ಈಗ ಸಮಸ್ಯೆಯೊಂದು ಎದುರಾಗುತ್ತದೆ. ಅದೇನೆಂದರೆ ನಾನು ಗವಿಯನ್ನು ಹೊಕ್ಕಾಗ ಇದ್ದ ಶರೀರವು ಬೃಹದಾ ಕಾರವಾಗಿ ಬೆಳೆದಿದೆ. ಈ ಗವಿಯ ಸಣ್ಣ ಬಾಗಿಲಿನಿಂದ ಹೊರಗೆ ಹೋಗುವುದು ಹೇಗೆ ಎಂಬ ಗಾಬರಿಯಿಂದ ಸಹಾಯಕ್ಕಾಗಿ ತನಗೆ ನೆನಪಿರುವ ದೇವರುಗಳನ್ನೆಲ್ಲಾ ಪ್ರಾರ್ಥಿಸುತ್ತಾನೆ. ಹೇ! ಗುರುದೇವ ಕಾಪಾಡು ಎಂದೆಲ್ಲಾ ಆರ್ತನಾದ ಗೈಯುತ್ತಾ ಬಳಲಿ ಬಾಯಾರಿ ಕ್ಷೀಣಿಸಿ ಸತ್ತೇ ಹೋಗುತ್ತಾನೆ. ಈ ಮೂರ್ಖನು ತನ್ನ ಭ್ರಮಾಲೋಕವನ್ನು ಬಿಟ್ಟು ಎದ್ದು ತಾನು ಹೊರಗೆ ಬಂದಿದ್ದರೆ ಈ ವಿಧ ಹೀನ ಸ್ಥಿತಿಯ ಸಾವು ಅವನಿಗೆ ಬರುತ್ತಿರಲಿಲ್ಲ.

ಸೋದರರರೇ! ಸಿಗರೇಟು ಸೇದುವ ಚಟವುಳ್ಳ ನಿಮ್ಮ ಮಿತ್ರರೊಬ್ಬರು ನಿಮ್ಮಲ್ಲಿಗೆ ಬಂದು ತನ್ನ ಚಟದ ಬಗೆಗಿನ ದೌರ್ಬಲ್ಯದ ಬಗ್ಗೆ ಹೇಳಿಕೊಂಡಿರಬಹುದು. ಏನು ಮಾಡಲಿ ಮಿತ್ರ ಈ ಸಿಗರೇಟಿನ ಕೆಟ್ಟ ಚಟ ನನ್ನನ್ನು ಕಾಡುತ್ತಿದೆ. ಈ ಮಾಯೆಯಿಂದ ಪಾರಾದರೆ ನಾನೇ ಧನ್ಯ ಆದರೆ ಆ ಮಾಯೆಯು ನನ್ನನ್ನು ಬಿಡುತ್ತಿಲ್ಲ ಎಂದು ಹೇಳಿಕೊಂಡಿರಲೂಬಹುದು. ನೀವು ಕೇಳಿರಲೂ ಬಹುದು. ಸಿಗರೇಟು ಹಚ್ಚಿ ಸೇದುತ್ತಿರುವ ತಾನು ವಿಚಾರವಂತನೇ ಆಗಿ ಸಿಗರೇಟನ್ನು ಎಸೆದಿದ್ದೇ ಆದರೆ ಸಿಗರೇಟು ಮಾಯೆಯೇ ಆಗಿದ್ದರೆ ಅದು ಎಗರಿ ಬಂದು ಆತನ ಕೈಸೇರಬೇಕಿತ್ತು. ಹೀಗಾಗಲು ಸಾಧ್ಯವಿಲ್ಲ. ಸಿಗರೇಟೆಂಬ ಮಾಯೆಯನ್ನು ಇವನು ಹಿಡಿದಿದ್ದಾನೆಯೇ ವಿನಾ ಸಿಗರೇಟ್ ಎಂಬ ಮಾಯೆ ಇವನನ್ನು ಹಿಡಿದಿಲ್ಲ. ಇದು ಅವನ ಮನೋ ದೌರ್ಬಲ್ಯ. ಅರ್ಥಾತ್ ವಿಚಾರ ಶೂನ್ಯತ್ವ ಆದ್ದರಿಂದ ಇವನು ಸಿಗರೇಟು ಹಿಡಿದಿದ್ದಾನೆಯೇ ವಿನಃ ಸಿಗರೇಟು ಇವನನ್ನು ಹಿಡಿದಿಲ್ಲ ಎಂಬುದೇ ಇದರ ಭಾವಾರ್ಥ. ಮನುಷ್ಯನು ಮಾಯೆಯನ್ನು ಹಿಡಿದಿದ್ದಾನೆಯೇ ವಿನಃ ಮಾಯೆ ಎಂಬುದಿಲ್ಲ, ಅದು ಹಿಡಿಯುವುದೂ ಇಲ್ಲ.

ದೈವಾರಾಧಕರೆಲ್ಲಾ ಅವರವರ ಇಷ್ಟದೈವವನ್ನು ಕುರಿತು ಪ್ರಾರ್ಥಿಸುವಾಗ ಹೇ! ಪರಮಾತ್ಮ ಎಂದು ಮೇಲ್ಮುಖವಾಗಿ ಕೈ ಎತ್ತಿ ಕೂಗುತ್ತಾರೆ. ಆತ್ಮನೇ ದೇವರು ಎಂದು ಇವರು ಅಂದುಕೊಳ್ಳುವುದು ಸರಿಯೇ ಆದರೂ ಅದರ ಅರ್ಥವನ್ನು ತಿಳಿಯದೇ ನಡೆಯುತ್ತಿರುವ ರೀತಿ ವಿರುದ್ಧವಾಗಿರುತ್ತದೆ. ಪರಮಾತ್ಮನೆಂದರೆ ಅವರವರ ಅಂತರಾತ್ಮನೇ ದೇವರೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಅದು ಎಲ್ಲರ ಒಳಗಿರುವುದೇ ವಿನಃ ಹೊರಗಿಲ್ಲ ಆದರೂ ಇವರು 'ಹೇ' ಎಂದು ಕೈಯೆತ್ತಿ ಹೊರಗೆ ಕೂಗುತ್ತಾರೆ. ಇವರ ಈ ವ್ಯವಹಾರ ಹೇಗಿದೆ ಎಂದರೆ ಮನೆಯ ಒಳಗಿರುವ ವಜ್ರ ದುಂಗುರವನು ರಸ್ತೆಯಲ್ಲಿ ಹುಡುಕಿದಂತೆಯೂ, ಉತ್ತರ ದಿಕ್ಕಿನ ಊರನ್ನು ತಲುಪಲು ದಕ್ಷಿಣಾಭಿಮುಖ ರಸ್ತೆಯಲ್ಲಿ ಪಯಣಿಸಿದಂತೆ ವಿರುದ್ಧವೇ ಆಗಿರುವ ಕ್ರಿಯೆಯಿಂದ ಯಥಾರ್ಥ ಸತ್ಯವನ್ನು ಅರಿತುಕೊಳ್ಳುವುದು ಅಸಾಧ್ಯವೇ ಆಗಿದೆ.

ಒಬ್ಬ ವೈದ್ಯನು ರೋಗಿಯೊಬ್ಬನ ಪ್ರಾಣವನ್ನು ಉಳಿಸಬೇಕೆಂದು ಹೋರಾಡುವುದು ಆತನ ಶರೀರವನ್ನು ಉಳಿಸಲೊ ಅಥವಾ ಆತನ ಶ್ವಾಸವನ್ನು ಉಳಿಸಲೋ ಯೋಚಿಸಿ ದೇವರನ್ನು ಈ ನಾಮಾಂಕಿತದಿಂದ ಸ್ತುತಿಸುತ್ತಾರೆ. *ಕಾಲಾಯ ನಮಃ। ಕಲವಿಕರಣಾಯ ನಮಃ । ಬಲಾಯ ನಮಃ। ಬಲಪ್ರಮಥಾಯನಮಃ। ಸರ್ವಭೂತಗಮನಾಯ ನಮಃ। ಮನೋನ್ಮನಾಯ ನಮಃ। ಉಗ್ರಕಪರ್ದಿ ನೀಲಕಂಠ, ಶಿತಿ ಕಂಠಃ ಕಪಾಲ ಹೃತಃ ।*

ಇದು ಜಗತ್ಪ್ರಾಣಶಕ್ತಿಯ ವರ್ಣನೆ, ಇದನ್ನೇ ಶಿವಶಕ್ತಿ ಎಂದಿದ್ದಾರೆ. ಶಿರಸ್ಸಿನಲ್ಲಿ ವಾಯುರೂಪದಲ್ಲಿ ಚಲಿಸುತ್ತಿರುವ ಪ್ರಾಣಶಕ್ತಿಯೇ ಶಿವನಾಗಿರುತ್ತಾನೆ. ಈ ಪ್ರಾಣಶಕ್ತಿಯನ್ನೇ ಪ್ರಭುದೇವರು ನಿರ್ಗುಣ ನಿರಾಕಾರ, ನಿರಂಜನ, ನಿರ್ವಿಕಾರ, ಎಂದೂ ಈ ಜಗತ್ ಪ್ರಾಣಶಕ್ತಿಯನ್ನೇ ಅಗಮ್ಯ, ಅಗೋಚರ, ಅಪ್ರಮಾಣ ಎಂದಿದ್ದಾರೆ.

*(ಮುಂದುವರೆಯುತ್ತದೆ.)*

**ಶ್ರೀವಾಣಿ**

ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನು ಗಳಿಸಬೇಕು. ಧರ್ಮಕ್ಕೆ ವಿರುದವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.

